

Chandamama, August '49 Photo by B. Ranganadham

ಕುಂಬಾರ

# ಚಂದಮಾಮ

## ನಾಲ್ಕು ಭಾಷೆಗಳಲ್ಲಿ

## ಕನ್ನಡ, ತೆಲುಗು, ತಮಿಳು ಮತ್ತು ಹಿಂದಿ

ಯಾವ ಭಾಷೆಯಲ್ಲೇ ಆಗಲಿ

**ಬಿಡಿ ಪ್ರತಿ ರೂ. ೦—೬—೦**

**ವಾರ್ಷಿಕ ಚಂದಾ ರೂ. ೪—೮—೦**



ಇಂದೇ ಚಂದಾದಾರರಾಗಿರಿ

## ಏಜೆಂಟರುಗಳು ಬೇಕು

ಏಜೆಂಟರುಗಳಿಲ್ಲದ ದೊಡ್ಡ ಪುಟ್ಟ ಹಳ್ಳಿಗಳಲ್ಲಿ ಚಂದಮಾಮನ ಮಾರಾಟಗಾರರು ರೂ. ೨–೦–೦ ಮಾತ್ರ ಕಳಿಸಿ ೭ ಪ್ರತಿಗಳನ್ನು ಪಡೆದು ರೂ. ೦–೧೦–೦ ಗಳ ಲಾಭವನ್ನು ಪಡೆಯಬಹುದು. ೧೫ರಿಂದ ೨೦ನೇ ತಾರೀಖಿನ ಒಳಗಾಗಿ ರೂ. ೨–೦–೦ನ್ನು ಮನಿಯಾರ್ಡರು ಕಳಿಸಿ ನಿಮ್ಮ ೭ ಪ್ರತಿಗಳನ್ನು ಪಡೆಯಿರಿ.

ಬಿಡಿ ಸಂಚಿಕೆ ಪ್ರತಿ ಒಂದಕ್ಕೆ

**ರೂ. ೦-೬-೦ ಮಾತ್ರ.**

* ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

CHANDAMAMA OFFICE
P. B. 1686, MADRAS—1.



## ಡೋಂಗ್ರೆ ಬಾಲಾಮೃತ

ಬಲಹೀನ ಮಕ್ಕಳಿಗೆ ಶಕ್ತಿಯನ್ನು ಕೊಡುವುದು. ಹಲ್ಲು ಮೊಳೆಯುವಾಗ ಆಗುವ ಭೇದಿಯನ್ನು ನಿಲ್ಲಿಸುವುದು. ಆರೋಗ್ಯ ಮತ್ತು ಪುಷ್ಟಿದಾಯಕವಾದುದು.

K. T. Dongre & Co., Bombay 4.

# ಚಂದಮಾಮನಲ್ಲಿ ಈ ಸಲ




## ಗ್ಯಾರಂಟಿಯುಳ್ಳ ಸ್ಟೈಯಿನ್‌ಲೆಸ್ ಸ್ಟೀಲ್ ಪಾತ್ರೆಗಳು

ಫಳಫಳನೆ ಕಾಂತಿಯುಳ್ಳದು ; ಮಾಸಿಹೋಗದು




ಲೋಟ, ಡಬರ, ಟಿಫಿನ್ ಕ್ಯಾರಿಯರ್, ಬಟ್ಟಲು, ಅಡಕು ಪಾತ್ರೆಗಳು, ಜೋಡದಲೆ ಸೆಟ್ಟು, ಚಮುಚ, ಪಚ್ಚಡಿ ಕಿನ್ನ, ಇತ್ಯಾದಿ ಇತ್ಯಾದಿ. ಪ್ರತಿ ಮನೆ ಮತ್ತು ಹೋಟಲುಗಳಿಗೆ ಬೇಕಾಗುವ ಸಕಲ ಪಾತ್ರೆ ಪದಾರ್ಥಗಳು ನಮ್ಮಲ್ಲಿ ದೊರಕುವುವು.

## ಇಂಡಿಯನ್ ಮೆಟಲ್ & ಮೆಟಲರ್ಜಿಕಲ್ ಕಾರ್ಪೊರೇಷನ್

ಈ ಕೆಳಕಂಡ ನಮ್ಮ ಷೋರೂಮುಗಳಿಗೆ ಭೇಟಿ ಕೊಡಿರಿ.

1. 498, ಮಿಂಟ್ ಸ್ಟ್ರೀಟ್, ಮದರಾಸು 3 & ಮೆಟ್ಟೂರು ಡ್ಯಾಂ.
2. 22/522, ದೊಡ್ಡ ಅಂಗಡಿ ಬೀದಿ, ಕೊಯಿಮುತ್ತೂರು.
3. 169/1429-30, ಮೇನ್ ರೋಡು (ತೇರು ಸಮೀಪ) ಸವಾಯಿಪೇಟೆ, ಸೇಲಂ.
4. ದಿ ಕನ್ನಡ ಕಮರ್ಷಿಯಲ್ ಕಾರ್ಪೊರೇಷನ್ ಲಿಮಿಟೆಡ್,
   61, ಟ್ಯಾಂಕ್ ಬಂಡ್ ರೋಡ್, ರಾಮಕೃಷ್ಣಪುರಂ, ಬೆಂಗಳೂರು ಸಿಟಿ.

ಸೂಚನೆ—.ಎಲ್ಲಾ ವ್ಯಾಪಾರಿಗಳಲ್ಲಿಯೂ ದೊರಕುವುದು.

# 500 ರೂಪಾಯಿಗಳ ಬಹುಮಾನ

## ಉಮಾ ಗೋಲ್ಡ್ ಕವರಿಂಗ್ ವರ್ಕ್ಸ

ಉಮಾ ಮಹಲ್ : : ಮಚಲೀಪಟ್ಟಣ


















UMA 607
Stone Ring
Rs 2-12-0



UMA 733
Stone Button
Rs 1-0-0

ಉಮಾ ಗೋಲ್ ಕವರಿಂಗ್ ವರ್ಕ್ಸ ಪ್ರೋಸ್ಪ್ಯಾಫೀಸ್ ಅಪ್ಪಟ ಬಂಗಾರದ ರೇಕನ್ನು ಲೋಹದ ಮೇಲೆ ಅಂಟಿಸಿ (Gold Sheet Welding on Metal) ತಯಾರು ಮಾಡುತ್ತೇವೆ. ಅಲ್ಲವೆಂದು ರುಜುವಾತು ಮಾಡಿದವರಿಗೆ ರೂ. 500 ಬಹುಮಾನ ಕೊಡುತ್ತೇವೆ. ನಾವು ತಯಾರಿಸಿ ಕಳಿಸುವ ಪ್ರತಿ ವಸ್ತು ಮತ್ತು ಪ್ಯಾಕಿಂಗಿನ ಮೇಲೆ "ಉಮಾ" ಎಂಬ ಇಂಗ್ಲೀಷು ಅಕ್ಷರದ ಗುರುತನ್ನು ನೋಡಿ ತೆಗೆದುಕೊಳ್ಳಿ. ಹತ್ತು ವರ್ಷಗಳ ಗ್ಯಾರಂಟಿಯುಂಟು.

ಇದನ್ನು ಪರೀಕ್ಷೆ ಮಾಡಲಿಚ್ಛಿಸುವವರು ಉಮಾ ಆಭರಣಗಳನ್ನು ಮಹಾ ದ್ರಾವಕದಲ್ಲಿ ಇಟ್ಟ 5 ನಿಮಿಷದಲ್ಲೇ ಬಂಗಾರದ ರೇಕು ಲೋಹದಿಂದ ಬೇರೆಯಾಗಿ ಬರುತ್ತದೆ. ಹೀಗೆ ಪರೀಕ್ಷೆ ಮಾಡಿದ ಅನೇಕ ಮಹನೀಯರು ನಮಗೆ ಸರ್ಟಿಫಿಕೇಟುಗಳನ್ನು ಕೊಟ್ಟಿರುವರು. 800 ಡಿಸೈನುಗಳುಳ್ಳ ನಮ್ಮ ಕ್ಯಾಟಲಾಗು ಉಚಿತವಾಗಿ ಕಳುಹಿಸುತ್ತೇವೆ.

ಇತರ ದೇಶಗಳಿಗೆ ಕ್ಯಾಟಲಾಗು ದರಕ್ಕೆ 25% ಅಧಿಕ ಬೆಲೆಯಾಗುತ್ತೆ.

*N. B.*- ವಸ್ತುಗಳ ವಿ. ಪಿ. ಪಾರ್ಸಲು ಛಾರ್ಜು ರೂ. 0-15-0

Tel. : "UMA", Masulipatam.



ಮಕ್ಕಳ ಆರೋಗ್ಯ ಮತ್ತು ಶಕ್ತಿಗೆ

## ಬಯೋಟೋನ




ರಾಯ್ & ಕೊ., ಪ್ರಿನ್ಸೆಸ್ ಸ್ಟ್ರೀಟ್,
ಬೊಂಬಾಯಿ ೨.


## ತರುಣ ಲೇಖಕರಿಗೆ

•

ಒಂದು ಪುಟ ಮೀರದ ಪುಟ್ಟ ಕತೆಗಳು, ಸರಳ ಕವನಗಳು, ಚುಟಕಗಳು, ಹಾಸ್ಯಗಳು, ವಿನೋದಗಳು ಇವಕ್ಕೆ ಯಾವಾಗಲೂ ಚಂದಮಾಮನು ಸ್ವಾಗತ ಕೋರುತ್ತಾನೆ. ಅವುಗಳಿಂದ ಓದುಗರಿಗೆ ಮತ್ತಷ್ಟು ಸಂತೋಷ ಕೊಡಲು ಪ್ರಯತ್ನಿಸುತ್ತಾನೆ.

# ಮುಖಚಿತ್ರ

**ಗೋ** ಕುಲದಲ್ಲಿದ್ದ ಗೋಪಗೋಪಿಯರೆಲ್ಲರೂ ನಂದಗೋಪ, ಕೃಷ್ಣ, ಬಲರಾಮ ರೊಂದಿಗೆ ಬೃಂದಾವನವನ್ನು ಸೇರಿದರೆಂದು ಹಿಂದೆಯೇ ಹೇಳಿದೆ. ಆ ಬೃಂದಾವನದ ಸೌಂದರ್ಯ ಅಷ್ಟಿಷ್ಟಲ್ಲ. ವರ್ಣಿಸಲಸಾಧ್ಯ. ಎಲ್ಲಿ ನೋಡಿದರೂ ಹಚ್ಚನೆಯ ಹುಲ್ಲು, ಹೂ ಗಿಡ ಮರಗಳು; ಅಲ್ಲೇ ಸುತ್ತಿ ಸುತ್ತಿ ಕಲಕಲನೆ ಹರಿಯುವ ಯಮುನಾ ನದಿ; ಬಳಿಯಲ್ಲೇ ಗೋವರ್ಧನ ಗಿರಿ; ಎಲ್ಲವೂ ನೋಡಲು ಸುಂದರ ದೃಶ್ಯವಾಗಿದ್ದಿತು. ಗೋಪ ಬಾಲಕ ಬಾಲಕಿಯರಿಗೆ ಆಟವಾಡಲು ಆನಂದದಾಯಕವಾಗಿದ್ದಿತು. ದನಕರುಗಳಿಗೆ ಯಥೇಚ್ಛ ಮೇವು ಸಿಕ್ಕಿ ಸ್ವೇಚ್ಛೆಯಿಂದ ತಿರುಗಾಡುತ್ತಿದ್ದುವು.

ಬೃಂದಾವನದ ಬಯಲುಗಳಲ್ಲಿ ಯಮುನಾ ತೀರದಲ್ಲಿ ಕೃಷ್ಣನು ತನ್ನ ಸಂಗಡಿಗರೊಡನೆ ಆಡದ ಆಟವೇ ಇಲ್ಲ. ನಿದ್ರೆಯ ಹೊರತು ಬಾಕಿಯ ಸಮಯವೆಲ್ಲಾ ಅಲ್ಲೇ ಕಳೆದುಬಿಡುವನು. ಕರುಗಳನ್ನು ಮೇಯಿಸುತ್ತಾ ಕೊಳಲು ಊದುತ್ತಾ ವಿಹರಿಸುವನು. ಹೀಗೆ ಸೌಖ್ಯವಾಗಿ ಕಾಲ ಕಳೆದಂತೆಲ್ಲಾ ದೊಡ್ಡವನಾಗುತ್ತಾ ಬಂದನು.

ಅವನ ಮುರಳೀ ಗಾನದ ಮಾಧುರ್ಯವನ್ನು ಅನುಭವಿಸಲು ಯಾರು ತಾನೇ ಇಷ್ಟಪಡುತ್ತಿರಲಿಲ್ಲ. ಗಾನವನ್ನು ಕೇಳಿ ಸಂಗಡಿಗರೆಲ್ಲರೂ ಮುಗ್ಧರಾಗಿಬಿಡುತ್ತಿದ್ದರು. ದನಕರುಗಳೂ ಕಿವಿ ನಿಮಿರಿಸಿ ಕೇಳಿ ಆನಂದಪಡುತ್ತಿದ್ದುವು. ಅಷ್ಟೇಕೆ? ನವಿಲುಗಳೂ ನಾಗಗಳೂ ಕೇಳಿ ನರ್ತನ ಮಾಡುತ್ತಿದ್ದುವು. ಬೆಳದಿಂಗಳಿನ ರಾತ್ರಿಗಳಲ್ಲಿ ಕೃಷ್ಣನು ಹೊನ್ನೆ ಮರದ ಕೆಳಗೆ ಕೊಳಲನ್ನೂದಿ ಎಲ್ಲರನ್ನೂ ಬೆರಗುಗೊಳಿಸಿ ತಾನು ಆನಂದಿಸುತ್ತಿದ್ದನು. ಆ ರೀತಿ ಸಾಕ್ಷಾತ್ ಶ್ರೀ ಕೃಷ್ಣನ ಜೊತೆಯಲ್ಲಿ ವಿಹರಿಸಿ ತಮ್ಮನ್ನೇ ಮರೆಯುತ್ತಿದ್ದ ಆ ಗೋಪ ಬಾಲ ಬಾಲಕಿಯರೇ ಧನ್ಯರು. ಆ ಪ್ರಾಣಿಗಳು ಪುಣ್ಯಶಾಲಿಗಳು. ಆ ಸ್ಥಳ ಪವಿತ್ರವು.

---


## ಹಿಂದಿಯಲ್ಲಿ ಚಂದಾಮಾಮ ಹೊರಟಿದೆ

ಇಂದೇ ಚಂದಾದಾರರಾಗಿರಿ

**ಬಿಡಿ ಪ್ರತಿ ರೂ. ೦-೬-೦** **ವಾರ್ಷಿಕ ಚಂದಾ ರೂ. ೪-೮-೦**

ವಿ. ಪಿ. ಕಳುಹಿಸುವುದಿಲ್ಲ. ಏಜೆನ್ಸಿ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ.

CHANDAMAMA PUBLICATIONS, P. B. 1686, MADRAS 1.




ಸಂಪುಟ ೩ | ಆಗಸ್ಟ್ ೧೯೪೯ | ಸಂಚಿಕೆ ೨

# ★ ಸ್ವಾತಂತ್ರ್ಯ ಧ್ವಜ ★

೧

ಮೆರೆಯಲಿ ಬಾವುಟ ನಮ್ಮದು ಬಾನಲಿ
ತಿರೆಯಲಿ ಸುಸ್ಥಿರವಾಗಿರಲಿ
ಪರದೇಶಿಯರನು ಮುಗ್ಧವಗೊಳಿಸುತ
ಹಾರಲಿ ಎತ್ತರಾಕಾಶದಲಿ.

೨

ಏರಲಿ ಮೇಲಕೆ ಬಾವುಟ ನಮ್ಮದು
ಸಾರಲಿ ವಿಶ್ವಕೆ 'ಶಾಂತಿ'ಯನು
ಕರೆಯಲಿ ಕನ್ನಡ ಕುವರರ ಮುಂದಕೆ
ಸುರಿಸಲು ಹೃದಯದಿ ಕೆನ್ನೀರ.

೩

ಏರಲಿ ಬಾವುಟ ನಮ್ಮದು ಮೇಲಕೆ
ಸಾರಲಿ ಜಗಕೆ 'ಅಹಿಂಸೆ'ಯನು
ಕರೆಯಲಿ ವೀರರ ಸೊಂಟವ ಕಟ್ಟಲು
ವೈರಿಯ ದರ್ಪವನಡಗಿಸಲು.

೪

ಬಾವುಟ ಹಾರಿಸಿ ಭಾರತ ವೀರರೆ
ಸಾವಿಗೆ ಹೆದರದೆ ಮೆರೆಯೋಣ
ಬಾವುಟ ಮೆರೆಯಲಿ ತಿರೆಯಲಿ ಶಾಶ್ವತ
ನೋವಿಗೆ ಹೆದರದೆ ನಲಿಯೋಣ.

ಕೆ. ಸರೋಜಿನಿದೇವಿ, ಉಡುಪಿ.




ನೇರಳೆ ಮರದಡಿ ಸೇರಿತು ಸಭೆಯು
ಊರಿನ ಹಿರಿ ಕಿರಿಯರು ಕೂಡಿ
ಎಲ್ಲಾ ಕಸುಬಿನ ಎಲ್ಲರು ಸೇರಿ
ಚರ್ಚಿಸುತಿದ್ದರು ಸಭೆಯಲ್ಲಿ

ರೈತ

ಊರಿನ ಜನರನು ಉಣಿಸುವೆನು
ಅವರಾ ಹೊಟ್ಟೆಯ ತಣಿಸುವೆನು
ನಾನೇ ಎಲ್ಲರಿಗಿಂತಲು ಹೆಚ್ಚು
ಎಂದನು ರೈತನು ಸಭೆಯಲ್ಲಿ

ನೆಯ್ಗೆಯವ

ಎಲವೋ ರೈತನೆ ನಿಂದೇನಧಿಕ
ನಾನೇ ಅಧಿಕವು ಚರ್ಚಿಸಲು
ಮಾನವ ಮುಚ್ಚಲು ಬಟ್ಟೆಯ ನೇಯುವೆ
ಮಾನವೆ ಅಧಿಕವು ಲೋಕದಲಿ

ಚಿಪ್ಪಿಗ

ಬಟ್ಟೆಯ ಜೇಡನು ಮಾಡಿದರೇನು?
ಅಂಗಿ ಟೊಪ್ಪಿಯ ಮಾಡುವನೇನು?
ಬಟ್ಟೆಯ ಹೊಲೆಯಲು ನಾನಿಹೆ ಚಿಪ್ಪಿಗ
ನಾನೇ ಅಧಿಕನು ಊರೊಳಗೆ

ಕುಂಬಾರ

ರೈತನು ಬೆಳೆಯಲಿ ಜೇಡನು ನೇಯಲಿ
ಅಡಿಗೆಯ ಮಾಡಲು ನಾ ಬೇಕು
ಮಡಕೆಯು ಇಲ್ಲದೆ ತಿನ್ನುವಿರೆಂತು?
ಎಂದನು ಹಳ್ಳಿಯ ಕುಂಬಾರ

ನಾಯಿಂದ

ಹಜಾಮನೆಂದರೆ ನಾನೇ ನೋಡಿ
ನಾನೇ ಅಧಿಕನು ಊರೊಳಗೆ
ನನ್ನೀ ಕೆಲಸದಿ ನಾ ಹಿಂದುಳಿದರೆ
ಮನುಜರು ಮಂಗಗಳಾಗುವರು

ಕಮ್ಮಾರ

ರೈತನು ಹೂಡಲು ಜೇಡನು ನೇಯಲು
ನಾನಿರಬೇಕೈ ಊರೊಳಗೇ
ನಾನೇ ಅಧಿಕನು ಊರೊಳಗೆನ್ನುತ
ಚರ್ಚಿಸಿ ನಿಂತನು ಕಮ್ಮಾರ

ಬಡಗಿ

ಬಾಗಿಲು ಕಿಟಕಿ, ನೇಗಿಲು ಒನಕೆ
ಮಾಡುವ ಬಡಗಿಯು ಅಧಿಕನಲ್ಲೆ
ಎತ್ತಿಗೆ ನೊಗವೂ, ಕತ್ತಿಗೆ ಹಿಡಿಯೂ
ಎಲ್ಲಿದೆ? ಬಡಗಿಯು ಇಲ್ಲದಿರೆ?

ಕಂಚುಗ

ತಾಮ್ರದ ತಗಡನು ಬಡೆಯುತ ಪಾತ್ರವ
ಮಾಡುವೆ ಚಂಬೂ ತಪ್ಪಲಿಯಾ
ನಾನಿಹೆ ಊರಲಿ ಅಧಿಕನು ನನ್ನನು
ಮರೆವಿರಿ ನೀವು ಯಾಕಾಗಿ?

[ಟಿ. ಚಂದ್ರರಾಜಸೆಟ್ಟಿ.]

ಕಲ್ಕುಟಿಗ

ಕಲ್ಲನು ಕೆತ್ತುತ ಬೆವರನು ಸುರಿಸುವ
ಕಲ್ಲುಕುಟಿಗನ ಮರೆಯುವಿರೇ?
ಎಲ್ಲರ ಮನೆಯನು ಕಟ್ಟಲು ನಾನೇ
ಬಲ್ಲವ ನಿರುತಿಹೆ. ನಾನಧಿಕ

ಉಪಾಧ್ಯಾಯ

ವಿದ್ಯೆಯನೀಯುತ ಬುದ್ಧಿಯ ಕಲಿಸುತ
ತಿದ್ದುತ ಮನುಜರನಿಹೆ ನಾನು
ವಿದ್ಯೆಯೆ ಅಧಿಕವು ಲೋಕದಿ, ಅದರಿಂ
ನಾನೇ ಅಧಿಕನು ಸರ್ವರೊಳು

ವ್ಯಾಪಾರಿ

ಕೊಳ್ಳುತ ಮಾರುತಲಿರುವವನೆಂದು
ಎನ್ನನು ಕಡೆಗಣಿಸುವಿರೇ ನೀವು
ಧಾನ್ಯವ ತರಿಸುತ ಮಾರುವ ಸೆಟ್ಟಿಯು
ನಾನೇ ಅಧಿಕನು ಲೋಕದಲಿ

ವೈದ್ಯ

ಹಣವನು ಹರಿಸಿ ಕಲಿತಿಹೆ ವಿದ್ಯೆಯ
ಸರ್ವರೋಗವ ಹರಿಸುವೆ ನಾನು
ರೋಗಿಗಳಳಿವರು ನಾನಿಲ್ಲದಲೆ
ನಾನೇ ಅಧಿಕನು ಊರೊಳಗೆ

ಬಂಡಿಯುವ

ಊರಿಂದೂರಿಗೆ ಪಯಣವ ಬೆಳೆಸಲು
ಎನ್ನಯ ಗಾಡಿಯು ಎಲ್ಲರಿಗೂ
ಬೇಕದರಿಂದಲಿ ನಾನೇ ಅಧಿಕನು
ಚರ್ಚಿಸಿ ದಣಿವಿರಿ ನೀವೇಕೆ?

ಗೌಳಿಗ

ದನಗಳ ಸಾಕುತ, ಹಾಲನು ಕರೆಯುತ
ಊರನೆ ಪೋಷಿಪ ಗೌಳಿಗನು
ನಾನಿಹೆ ಅಧಿಕನು ಯಾಕೈ ದಣಿವಿರಿ
ಸುಮ್ಮನೆ ಜಗಳವ ಮಾಡುವಿರಿ

ಗಾಣಿಗ

ಬೀಜವ ಹಿಂಡುತ ಎಣ್ಣೆಯ ತೆಗೆಯುತ
ಜೀವಿಪ ಗಾಣಿಗನಧಿಕನಲ್ಲೇ?
ಜನರಿಗೆ ಎಂಣೆಯ ನೀಯುವ ನಾನೇ
ಅಧಿಕನು. ಚರ್ಚಿಸಿ ಫಲವೇನು!

ಚಮ್ಮಾರ

ಎಲ್ಲರು ಕಾಲಿಗೆ ಮೆಟ್ಟುವ ಎಕ್ಕಡ
ಮಾಡಲು ನಾನಿಹೆ ಸಮಗಾರ
ಚರ್ಮದ ಹದವನು ತಿಳಿಯುತ ಮೆಟ್ಟನು
ಮಾಡುವ ನಾನೇ ಅಧಿಕನಿಹೆ

ಅಗಸ

ಎಲ್ಲರ ಬಟ್ಟೆಯ ಕೊಳೆಯನು ತೆಗೆಯುತ
ಲೋಕವ ಮಡಿ ಮಾಡುತ ನಾನು
ಜೀವಿಪೆನದರಿಂ ನಾನೇ ಅಧಿಕನು
ಎನ್ನನು ಮರೆತಿರೆ ನೀವೆಲ್ಲಾ?

ಚಿತ್ರಗಾರ

ಬೇಸರ ತುಂಬಿದ ಜನರಾ ಮನವನು
ತಣಿಸಲು ನಾನೇ ಬಲ್ಲವನೂ
ಲಲಿತ ಕಲೆಗಳಾ ಘನತೆಯ ಚಿತ್ರವ
ಬರೆಯುತ ಜೀವಿಪ ನಾನಧಿಕ

ಹೂವಾಡಿಗ

ಗಿಡಗಳ ಬೆಳೆಸುತ ಹೂವನು ಕೊಯ್ಯುತ
ಮಾಲೆಯ ಮಾಡುತ ಮಾರುವೆನು
ಎಲ್ಲರ ಮದುವೆಯ ಸಮಯದಿ ನಾನೇ
ಬೇಕೈ ಅದರಿಂ ನಾನಧಿಕ

ಅಕ್ಕಸಾಲೆ

ಕತ್ತಿಗೆ ಹಾರವ ಕೈಗಳ ಬಳೆಯನೂ
ಮಾಡುತ ಜನರನು ಶೃಂಗರಿಪಾ
ಅಕ್ಕಸಾಲೆಯೇ ಅಧಿಕನು ಊರೊಳು
ಯಾತಕೆ ಸುಮ್ಮನೆ ಗಳಹುವಿರೀ

ವಾದ್ಯಗಾರ

ಹಸುಳೆಯು ಜನಿಸಲು ಮದುವೆಯು ಜರಗಲು
ಶುಭಕಾರ್ಯಕೆಲ್ಲಾ ನಾ ಬೇಕು
ಎನ್ನಯ ವಾಲಗ ಇಲ್ಲದೆ ಇದ್ದರೆ
ಜಾತ್ರೆಯು ನಡೆಯದು ನಾನಧಿಕ

ಪತ್ರಿಕಾಕರ್ತ

ದೇಶ ವಿದೇಶದ ವಾರ್ತೆಯನು
ತಿಳಿಸುವ ಸಂಪಾದಕ ನಾನು
ಸರ್ವರೆನ್ನಯಾ ಪತ್ರವ ನೋಡುತ
ವಿಷಯವ ತಿಳಿವರು ನಾನಧಿಕ

ಮೇದರವ

ಕಾಡಿಂ ಕಾಡಿಗೆ ಅಲೆಯುತ ಬೀಳನು
ತೆಗೆಯುತ ಬುಟ್ಟಿಯ ಹೆಣೆಯುವೆನು
ಎಲ್ಲಾ ಕೆಲಸಕು ನನ್ನಯ ಬುಟ್ಟಿಯೆ
ಬೇಕೈ! ನಾನೇ ಅಧಿಕನಿಹೆ

ಕೂಲಿಕಾರ

ಕೂಲಿಯ ಮಾಡುತ ಜೀವಿಪ ನನ್ನನು
ಕಡೆಗಣಿಸುವಿರೇ ನೀವೆಲ್ಲಾ
ಎಲ್ಲಾ ದುಡಿಮೆಗೆ ಕೆಲಸಕೆ ನಾನೇ
ಅದರಿಂ ನಾನೇ ಅಧಿಕನಿಹೆ

ಎನ್ನುತ ಬಿದ್ದಿತು ಚರ್ಚೆಯು ಸಭೆಯೊಳು
ಕೇಳುವರಾರು? ಬೊಬ್ಬೆಯೆ ಬೊಬ್ಬೆ
ಮೆಲ್ಲನೆ ಎದ್ದರು ಸಭೆಗಧ್ಯಕ್ಷರು
ತಿಳಿಸಿದರೀಪರಿ ಎಲ್ಲರಿಗೂ

ಒಂದೆ ದೇಹದ ಅಂಗಗಳೊಳಗೆ
ಕಿರಿದಾದಂಗವು ಯಾವುದಿದೆ?
ಎಲ್ಲವು ಹಿರಿದೇ, ಅಂತೆಯೆ ಎಲ್ಲರು
ಅಧಿಕರು ಯಾತಕೆ ಬಡಿದಾಟ






ಒಂದಾನೊಂದು ಕಾಲದಲ್ಲಿ ಭದ್ರಕನೆಂಬ ರಾಜನು ನೇಪಾಳ ದೇಶವನ್ನು ಆಳುತ್ತಿದ್ದನು. ಆ ರಾಜನಿಗೆ ಪುರೋಹಿತರಲ್ಲಿ, ಜೋತಿಷ್ಕರಲ್ಲಿ ಗೌರವವಿರಲಿಲ್ಲ. ಪುರೋಹಿತರು ಗೊತ್ತುಮಾಡುವ ಸುಮುಹೂರ್ತಗಳಾಗಲೀ ಜೋತ್ಕಿಷರು ಹೇಳುವ ಭವಿಷ್ಯವಾಗಲೀ ನಿಜವಾಗುತ್ತದೆಂಬ ನಂಬಿಕೆ ಆತನಿಗಿರಲಿಲ್ಲ. ಪ್ರಶ್ನೆ ಹೇಳುವೆನೆಂದು ಆತನ ಆಸ್ಥಾನಕ್ಕೆ ಬಂದವರನ್ನೆಲ್ಲಾ ಮೂದಲಿಸುತ್ತಿದ್ದನು. ಮತ್ತು ಗೇಲಿ ಮಾಡುತ್ತಿದ್ದನು.

ಒಂದು ದಿನ ರಾಜನು ಬೇಟೆಗೆ ಹೊರಟನು. ಆತನೊಂದಿಗೆ ಮಂತ್ರಿ, ಪುರೋಹಿತ, ಸೇನಾಧಿಕಾರಿ, ಮುಂತಾದವರು ಹೊರಟರು. ಬೇಟೆಗಾರರೂ, ಬೇಟೆನಾಯಿಗಳೂ ಅವರನ್ನು ಹಿಂಬಾಲಿಸಿದವೆಂದು ಬೇರೆ ಹೇಳಬೇಕೆ? ಪರಿವಾರವೆಲ್ಲಾ ಹೊರಟಿತು.

ಅವರೆಲ್ಲರೂ ಕಾಡುಮಾರ್ಗದಲ್ಲಿ ಹೋಗುತ್ತಿದ್ದರೆ ಒಂದು ಮೈನಾ ಪಕ್ಷಿ ಹಾರಿ ಬಂದು ಪಕ್ಕದಲ್ಲಿದ್ದ ಮರದ ಮೇಲೆ ಕುಳಿತು 'ಕುಯಕ್ ಕುಯಕ್' ಎಂದು ಕೂಗಿತು. ರಾಜನು ಪುರೋಹಿತನ ಕಡೆ ನೋಡಿ "ಶಾಸ್ತ್ರಿಗಳೇ ಆ ಪಕ್ಷಿಯ ಮಾತುಗಳ ಅರ್ಥವೇನು" ಎಂದು ಕೇಳಿದನು.

ಆ ಶಾಸ್ತ್ರಿಗಳಿಗೆ ಪಕ್ಷಿ ಭಾಷೆ ತಿಳಿದಿತ್ತು. ಏನು ಹೇಳುವನೋ ನೋಡೋಣವೆಂದು ರಾಜನು ಆತನನ್ನು ಕೇಳಿದನು. ಎಲ್ಲರೂ ಪುರೋಹಿತನ ಕಡೆ ದೃಷ್ಟಿ ಬೀರಿದರು. ಪುರೋಹಿತನು ಸ್ವಲ್ಪ ಹೊತ್ತು ಅತ್ತಿತ್ತ ನೋಡಿದ. ದೂರದಲ್ಲಿ ಬೆಟ್ಟದ ಕಡೆಗೆ ಹುಲ್ಲಿಗಾಗಿ ಕುಡಗೋಲನ್ನು ಹಿಡಿದುಕೊಂಡು ಹೋಗುತ್ತಿದ್ದ ಒಬ್ಬ ಒಕ್ಕಲಿಗನ ಕಡೆ ಬೆರಳು ಮಾಡಿ "ಪ್ರಭೂ, ನೋಡಿದಿರಾ, ಆ ಒಕ್ಕಲಿಗನನ್ನು. ಸ್ವಲ್ಪ ಹೊತ್ತಿನಲ್ಲಿ ಆತನು ಹಾವು ಕಡಿತದಿಂದ ಸಾಯುವನೆಂದು ಆ ಪಕ್ಷಿ ಹೇಳುತ್ತಿದೆ" ಎಂದನು. ಈ ವಿಚಾರ ನಿಜವಾಗುವುದೋ ಇಲ್ಲವೋ ಪರೀಕ್ಷಿಸಲೋಸುಗ,

ಭಾಸ್ಕರರಾವು.



ರಾಜನು ಅಂದು ಬೇಟೆಯಾಡುವುದನ್ನು ಅಷ್ಟಕ್ಕೇ ನಿಲ್ಲಿಸಿ ತನ್ನ ಪರಿವಾರದೊಂದಿಗೆ ಅಲ್ಲೇ ಬಿಡಾರ ಹಾಕಿದನು.

ಸ್ವಲ್ಪ ಹೊತ್ತಾದ ಮೇಲೆ ಆ ಒಕ್ಕಲಿಗನು ಒಂದು ದೊಡ್ಡ ಹುಲ್ಲಿನ ಹೊರೆಯನ್ನು ತಲೆಯ ಮೇಲಿಟ್ಟುಕೊಂಡು ಬೆಟ್ಟದ ಪಕ್ಕದಿಂದಲೇ ಹಿಂತೆರಳುತ್ತಿದ್ದ. ಒಕ್ಕಲಿಗನು ಕಾಣಿಸಿದ ಕೂಡಲೇ, ಪುರೋಹಿತನು ಸುಳ್ಳನೆಂತಲೂ, ಉತ್ತರ ಕೊಡಲೇಬೇಕಾದ ಸಂದರ್ಭ ಒದಗಿದ್ದರಿಂದ ಏನೋ ಸುಳ್ಳೂ ಪಳ್ಳೂ ಆಡಿದನೆಂದೂ, ಶಾಸ್ತ್ರ ಗೀಸ್ತ್ರ ಅರಿಯದೆಂದೂ ರಾಜ ಮತ್ತು ಅವನ ಪರಿವಾರ ಪುರೋಹಿತನನ್ನು ಅಪಹಾಸ್ಯ ಮಾಡಲು ಆರಂಭಿಸಿದರು.

ರಾಜನು ಪುರೋಹಿತನನ್ನು ತಮಾಷೆಗಾಗಿ "ಏನು ಶಾಸ್ತ್ರಿಗಳೇ, ಸತ್ತ ಮನುಷ್ಯ ಮತ್ತೆ ಬರುವದೂ ಉಂಟೋ! ಆ ಒಕ್ಕಲಿಗ ಸತ್ತುಹೋಗುವನೆಂದಿರಿ? ನೋಡಿ, ಹುಲ್ಲಿನ ಹೊರೆಯೊಂದಿಗೆ ಅವನು ಬರುತ್ತಿರುವ ಠೀವಿ! ಒಂದು ವೇಳೆ ಯಮದೂತನಿಗೇನಾದರೂ ಲಂಚ ಕೊಟ್ಟು ತಪ್ಪಿಸಿಕೊಂಡು ಬಂದನೋ? ಇಲ್ಲ, "ನನ್ನ ಹೆಂಡತಿ ಮಕ್ಕಳಿಗೆ ಹೇಳಿ ಬರಲಿಲ್ಲ, ಅವರಿಗೆ ತಿಳಿಸದೆ ಸತ್ತು ಹೋದರೆ ಅವರು ಗೋಳಾಡುವರು, ಹೋಗಿ ಹೇಳಿಬಿಟ್ಟು ಬರುತ್ತೇನೆ" ಎಂದು ಮೃತ್ಯುವನ್ನೊಪ್ಪಿಸಿ ಬರುತ್ತಿರುವನೋ? ಏಕಯ್ಯಾ, ಮಾತನಾಡುವುದಿಲ್ಲ? ಹಾವು ಕಡಿತದಿಂದಲ್ಲವೆ ಅವನು ಸಾಯುವನೆಂದೆ? ಏನಾಯಿತು ವಿಷ? ಅವನ ಬೆವರಿಗೆ ಕರಗಿಹೋಯಿತೇ? ಇಲ್ಲ, ಪಕ್ಷಿಯ ಬುದ್ಧಿ ಕೆಟ್ಟುಹೋಯಿತೇ? ಹೇಳೋಣವಾಗಲಿ." ಎಂದ. ರಾಜನೂ, ಮಿಕ್ಕ ಪರಿವಾರದವರೂ ಆ ಶಾಸ್ತ್ರಿಗಳನ್ನು ಅಪಹಾಸ್ಯ ಮಾಡಿದರು. "ಪಕ್ಷಿಗಲ್ಲ ಬುದ್ಧಿ ಕೆಟ್ಟಿರುವುದು, ಶಾಸ್ತ್ರಿಗಳಿಗೆ" ಎಂದನು ಸೇನಾಧಿಕಾರಿ.

ಆತ್ಮಗೌರವವಿದ್ದ ಶಾಸ್ತ್ರಿಗಳು ಈ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಗಟ್ಟಿಮುಟ್ಟಾಗಿ ಬರುತ್ತಿದ್ದ ಒಕ್ಕಲಿಗನನ್ನು ನೋಡಿ ಬೆರಗಾದರು. "ಎಲಾ ನಾನು ಇದುವರೆವಿಗೆ ನುಡಿದ ಒಂದು ಮಾತೂ ಸುಳ್ಳಾಗಲಿಲ್ಲ. ನನ್ನ ಬಾಯಿಯಿಂದ ಯಾವ ಮಾತು

ಹೊರಬಿದ್ದರೂ ಅದರಂತೆ ನಡೆಯುವಹಾಗೆ ನನ್ನ ಇಷ್ಟದೇವತೆ ವರ ಕೊಟ್ಟಿದ್ದಾಳೆ. ಆ ಧೈರ್ಯದಿಂದಲೇ ಅಲ್ಲವೇ ನಾನು ಜೋತಿಷ್ಯ ವೆಂದರೆ ನಂಬಿಕೆ ಇಲ್ಲದ ಈ ರಾಜನ ಹತ್ತಿರ ನಿಭಾಯಿಸಿಕೊಂಡು ಕಾಲ ಕಳೆಯುತ್ತಿರು ವೆನು. ಮತ್ತೆ ಇಂದು ನನ್ನ ಮಾತು ನಡೆ ಯದಿರಲು ಕಾರಣವಾದರೂ ಏನಿರ ಬಹುದು" ಎಂದು ಮನಸ್ಸಿನಲ್ಲೇ ಯೋಚಿಸು ತ್ತಿದ್ದರು.

ಹೋಗುತ್ತಿದ್ದ ರೈತನನ್ನು ಕೂಗಿ "ಎಲ್ಲಣ್ಣ, ಆ ಹೊರೆಯನ್ನು ಒಂದು ಸಾರಿ ಸ್ವಲ್ಪ ಇಳಿಸು, ನೋಡೋಣ" ಎಂದರು ಶಾಸ್ತ್ರಿಗಳು. ರೈತ ಆಶ್ಚರ್ಯದಿಂದ ಅವರನ್ನು ಮಿಕಮಿಕನೆ ನೋಡಿ ಹೊರೆ ಕೆಳಗೆ ಹಾಕಿದ. ಶಾಸ್ತ್ರಿ ಗಳು "ಹೊರೆ ಬಿಚ್ಚು" ಎಂದರು. ಯಾಕೆ ಹೀಗೆ ಶೋಧಿಸುತ್ತಿರುವರೋ ಅವನಿಗೆ ತಿಳಿ ಯಲಿಲ್ಲ. ಹೊರೆಯನ್ನು ಅವರ ಮುಂದೆಯೇ ಬಿಚ್ಚಿದ. ಅದರಲ್ಲಿ ಹಾವಿನ ತಲೆ, ಮತ್ತು ಬಾಲದ ತುಂಡುಗಳು ಕಾಣಿಸಿದುವು. ರೈತ 'ಅಯ್ಯೋ' ಎಂದು ಹೌ ಹಾರಿದ. ಶಾಸ್ತ್ರಿ ಗಳು ಆ ಒಕ್ಕಲಿಗನೊಂದಿಗೆ "ಭಯಪಡ ಬೇಡ ಆ ಹಾವು ನಿನ್ನನ್ನು ಕಡಿಯಲು ಬಂದು ನಿನ್ನ ಕುಡುಗೋಲಿನಿಂದ ಕತ್ತರಿಸಲ್ಪಟ್ಟು ಸತ್ತುಹೋಗಿದೆ" ಎಂದು ಧೈರ್ಯ ಹೇಳಿದರು.

ತಮ್ಮ ಮಾತು ಫಲಿಸಿದ್ದಕ್ಕೆ ಹೆಮ್ಮೆಯಿಂದ ಪುರೋಹಿತರು ರಾಜನ ಮತ್ತು ಆತನ ಪರಿ ವಾರದ ಕಡೆ ತಿರುಗಿ "ಶಾಸ್ತ್ರ ಮತ್ತು ಅದರ



ಮಹಿಮೆಯನ್ನು ನೋಡಿದಿರಾ, ಪ್ರಭೂ? ಇವುಗಳಲ್ಲಿ ನಂಬಿಕೆ ಇಲ್ಲದವರಿಗೆ ಎಷ್ಟು ಹೇಳಿದರೂ ಪ್ರಯೋಜನವಾಗಲಾರದು. ಈಗ ಆಳುವ ಮಹಾಸ್ವಾಮಿಯವರು ಪ್ರತ್ಯಕ್ಷ ವಾಗಿ ನೋಡಿದಿರಾದ್ದರಿಂದ ಸರಿಹೋಯಿತು. ಇಲ್ಲದಿದ್ದರೆ ಶಾಸ್ತ್ರಿಗಳಿಗೆ ಬೆಲೆಯೇನಿದೆ? ಇಷ್ಟವಿದ್ದಲ್ಲಿ ನಂಬಬಹುದು. ಇಲ್ಲದಿದ್ದರೆ ಬಿಡಬಹುದು. ಅಷ್ಟೇ ಹೊರತು ಶಾಸ್ತ್ರ ವನ್ನೇ ದೂಷಿಸುವುದು ಸರ್ವಥಾ ನ್ಯಾಯ ವಲ್ಲ." ಶಾಸ್ತ್ರಿಗಳು ಹೇಳಿದ ಈ ಮಾತಿಗೆ ರಾಜನು ನಿರ್ಘಾಂತನಾದನು. ಪುರೋಹಿತ ರನ್ನು ಅಪಹಾಸ್ಯ ಮಾಡಿದ್ದಕ್ಕೆ ರಾಜನು ಬಹಳ ಪಶ್ಚಾತ್ತಾಪಪಟ್ಟನು. ಆತನೊಡನೆ

ಇದ್ದ ಪರಿವಾರದವರು ಗಲ್ಲ ಗಲ್ಲ ಹೊಡೆದು ಕೊಂಡರು. ಆದರೆ ರಾಜನಿಗೂ ಆತನ ಅನುಯಾಯಿಗಳಿಗೂ ಒಂದು ಸಂದೇಹ ಬಗೆ ಹರಿಯಲಿಲ್ಲ. ರಾಜ ಕೇಳಿದ, "ಶಾಸ್ತ್ರಿಗಳೇ, ಇಂದು ಈತನು ಈ ಗಂಡಾಂತರದಿಂದ ಪಾರಾ ಗಲು ಯಾವುದೋ ಮಹತ್ತರ ಕಾರಣವಿರ ಬೇಕಲ್ಲವೇ?"

"ಹೌದು, ಇರಲೇಬೇಕು. ಈತನಿಂದು ಯಾವುದೋ ಪುಣ್ಯ ಕಾರ್ಯ ಮಾಡಿರಲೇ ಬೇಕು........ ಏನಣ್ಣಾ, ಇಂದೇನಾದರೂ ವಿಶೇಷ ನಡೆಯಿತೇನು?" ಎಂದು ಪುರೋ ಹಿತರು ಕೇಳಿದರು.

"ನನ್ನೊಡೆಯಾ, ನಾನು ಮುಂಜಾನೆ ಬರು ವಾಗ್ಯೆ ಆ ಬೆಟ್ಟದ ಅಂಚ್ಯೆತೇ ನೋಡಿ, ಅಲ್ಲಿ ಒಬ್ಬ ಮುದುಕಪ್ಪ ಮೂಗ್ಮುಚ್ಕೊಂಡು ಜಪ ಮಾಡ್ತಿದ್ದ. ಆ ಸ್ವಾಮಿಗಳನ್ನೋಡಿ ಮನ್ಸಾಗೆ ನಮಸ್ಕಾರ ಮಾಡ್ಬೇಕೆನ್ನಿಸ್ತು. ಅವರ ಪಾದ ಕ್ಬಿದ್ದೆ. ಅವ್ರು "ಚಿರಕಾಲ ಬಾಳು" ಅಂದ್ರು. ಇಷ್ಟೇ ವೊರ್ತು ಮತ್ತೇನೂ ನಡೀಲಿಲ್ಲ, ಸ್ವಾಮೀರ." ಎಂದ. ಪುರೋಹಿತರು "ಪ್ರಭೂ, ಕೇಳಿದಿರಲ್ಲವೇ. ಆ ವೃದ್ಧನ ಆಶೀರ್ವಾದದಿಂದ ಈ ಒಕ್ಕಲಿಗ ಬದು ಕಿದ" ಎಂದರು.

ರಾಜರಿಗೂ, ಶಾಸ್ತ್ರಿಗಳಿಗೂ, ಆ ಒಕ್ಕಲಿ ಗನು ನಮಸ್ಕರಿಸಿ, ಹೊರೆಯನ್ನು ಹೊತ್ತು ಕೊಂಡು ತನ್ನ ದಾರಿ ಹಿಡಿದ. ದೊಡ್ಡವರ ಮಹಿಮೆಯನ್ನು ಅರಿತು, ಅಂದಿನಿಂದ ರಾಜನು ಹಿರಿಯರೆಂದರೆ ತುಂಬಾ ಗೌರವದಿಂದ ನಡೆ ದುಕೊಳ್ಳುತ್ತಿದ್ದ.

ನಮ್ಮ ಪುರೋಹಿತರ ಮಾತಿನಲ್ಲಿ ರಾಜನಿಗೆ ತುಂಬಾ ನಂಬಿಕೆ ಉಂಟಾಯಿತು. ತನ್ನ ಜೀವಮಾನದಲ್ಲಿ ಮತ್ತೆ ಎಂದೂ ಶಾಸ್ತ್ರಿ ಗಳನ್ನು ಅವಹೇಳನ ಮಾಡಲಿಲ್ಲ. ಪುರೋ ಹಿತರನ್ನು ಮಾತ್ರವಲ್ಲದೆ, ತನ್ನನ್ನು ಆಶ್ರಯಿ ಸಲು ಬರುತ್ತಿದ್ದ ಜೋತಿಷ್ಕರಿಗೂ ಆಸ್ಥಾನ ದಲ್ಲಿ ಬಹಳ ಸನ್ಮಾನವು ಸಿಗುತ್ತಿತ್ತು.






ಹಾನುಗಲ್ಲ ರಾಜ್ಯವನ್ನು ಬಿಟ್ಟು ಅಡವಿ ಮಾರ್ಗದಲ್ಲಿ ಬಾಲಕನು ಹಗಲಿಲ್ಲಾ ನಡೆದನು. ಎಂಟು ಗಾವುದ ನಡೆದರೂ ಒಂದು ಊರೂ ಕಾಣಿಸಲಿಲ್ಲ. ಕತ್ತಲೆಯಾಯಿತು. ತಂದಿದ್ದ ಬುತ್ತಿಯನ್ನು ತಿಂದು ಒಂದು ಮರದ ಕೆಳಗೆ ನಿದ್ದೆ ಹೋದನು. ಆತನು ಬೆಳಗ್ಗೆ ಎದ್ದು ನೋಡುವಷ್ಟರಲ್ಲಿ ಹನ್ನೆರಡು ತಲೆಗಳ ನಾಗರಾಜನು ತನ್ನ ತಲೆಯ ಹತ್ತಿರ ಹೆಡೆಗಳನ್ನು ಬಿಚ್ಚಿರುವುದು ಕಾಣಿಸಿತು. ಸರ್ಪರಾಜನಿಂದ ತೊಂದರೆಯಾದೀತೆಂದು ನೆನೆದು ಬಾಲಕನು ಚಂದ್ರಾಯುಧವನ್ನು ಹೊರಗೆ ತೆಗೆದನು. ಮೇಲೆತ್ತಿದ ಕೈ ಹಾಗೇ ನಿಂತಿತು.

“ಬಾಲವದ್ಧಿರಾಜ, ನಿನ್ನ ತಾಯಿ ಬಾಲನಾಗಮ್ಮ ನಾಗೇಂದ್ರನ ವರಪ್ರಸಾದದಿಂದ ಹುಟ್ಟಿದವಳು. ಆದ್ದರಿಂದ ನೀನು ನನಗೆ ಮೊಮ್ಮಗನಾಗಬೇಕು. ನೀನು ನಿನ್ನ ತಾಯಿಯನ್ನು ಕರೆದುಕೊಂಡುಬರುವೆ. ನಿನ್ನ ಕೈಯಿಂದಲೇ ಆ ಮಾಯಾ ಫಕೀರನಿಗೆ ಸಾವು. ಆದರೆ ನಿನಗೆ ಒಂದು ಚಿಕ್ಕ ಗಂಡಾಂತರವಿದೆ. ನಾಗರ ಗುಡ್ಡದ ಕಟ್ಟೆಯ ಹತ್ತಿರ ಫಕೀರ ಒಂದು ಶಕ್ತಿಯನ್ನು ಕಾವಲಿರಿಸಿದ್ದಾನೆ. ಆ ಮಾಯಾವಿನಿ ವೇಷ ಧರಿಸಿಕೊಂಡು ಕುಲುಕುತ್ತಾ ಕುಣಿಯುತ್ತಾ ನಿನ್ನ ಹತ್ತಿರ ಬರುವಳು. ಅದರ ಮಾಯೆಯಲ್ಲಿ ಸಿಕ್ಕಿಕೊಳ್ಳಬೇಡ. ಎಚ್ಚರಿಕೆಯಿಂದಿರು” ಎಂದು ಬಾಲಕನೊಂದಿಗೆ ನಾಗರಾಜನು ಹೇಳಿದನು.

ಈ ಮಾತುಗಳನ್ನು ಕೇಳಿ ಬಾಲಕನು ನಾಗರಾಜನಿಗೆ ನಮಸ್ಕರಿಸಿ ಆಶೀರ್ವಾದ ಪಡೆದನು. ಅಲ್ಲಿಂದ ನಡೆದು ಹುಲಿರಾಜ ಪಟ್ಟಣವನ್ನು ಸೇರಿದನು. ಒಂದು ಅಡಗೂಲಜ್ಜಿಯ ಮನೆ ತಲುಪಿದನು.

ಬಾಲಕನು ತಿಂಡಿ ತೀರ್ಥವಿಲ್ಲದೆ ಬಹಳ ದೂರದಿಂದ ಬಂದಿರುವನೆಂದು ಅಡಗೂಲಜ್ಜಿ ಅರಿತಳು. ಕೂಡಲೇ ಒಲೆ ಹೊತ್ತಿಸಿ ಅಡಿಗೆ ಮಾಡಲಾರಂಭಿಸಿದಳು.

‘ಅಜ್ಜೀ ಈ ಊರಿನಲ್ಲಿ ಏನು ವಿಶೇಷ?’ ಎಂದು ಹುಡುಗ ಕೇಳಿದ.



ಅದಕ್ಕೆ ಮುದುಕಿಯು ಈರೀತಿ ಹೇಳಿದಳು. "ನೀನು ಕೇಳಲಿಲ್ಲವೇ? ನಮ್ಮ ಊರಿನ ಕೋಟೆಯ ಉತ್ತರದ ಬಾಗಿಲ ಹೊರಗೆ ಸೀ ನೀರಿನ ಭಾವಿಯ ಹತ್ತಿರ ಒಂದು ಹಾಳು ಹುಲಿ ಸೇರಿದೆ. ಆರು ತಿಂಗಳಿಂದ ಅತ್ತಕಡೆ ಸುಳಿದವರನ್ನೆಲ್ಲಾ ಕೊಂದು ತಿಂದುಹಾಕುತ್ತಿದೆ. ಅದನ್ನು ಸಾಯಿಸಲು ಯಾರಿಂದಲೂ ಆಗಲಿಲ್ಲ" ಎಂದಳು ಅಜ್ಜಿ. "ನಿಮ್ಮ ರಾಜ ಏನು ಮಾಡುತ್ತಿದ್ದಾನೆ?"

"ಏನು ಮಾಡುತ್ತಾರೆ? ಯಾವ ಕುಲದವನೇ ಆಗಲೀ, ಆ ಹುಲಿಯನ್ನು ಕೊಂದ ಪಕ್ಷದಲ್ಲಿ ತನ್ನ ಮಗಳನ್ನಿತ್ತು ವಿವಾಹ ಮಾಡುವೆನೆಂಬುದಾಗಿ ಸಾರಿದ್ದಾನೆ. ಆದರೂ ಹುಲಿಯನ್ನು ಸಾಯಿಸುವ ಧೀರನೆಲ್ಲಿ?"

ಬಾಲಕನು ಊಟ ಮುಗಿಸಿ ಮಲಗಿಕೊಂಡ. ಬೆಳಗಾದ ಕೂಡಲೇ ಸ್ನಾನ ಮಾಡಿದ. ಅಂಬಲಿ ಕುಡಿದ. ರತ್ನಗಂಬಳಿಯನ್ನು ಭುಜದ ಮೇಲೆ ಹಾಕಿಕೊಂಡು ಉತ್ತರದ ಬಾಗಿಲಿನ ಹತ್ತಿರಕ್ಕೆ ಬಂದ.

ಆ ಬಾಗಿಲಿಗೆ ಬೀಗ ಹಾಕಿತ್ತು. ಆದರೆ ಅಲ್ಲಿ ಕಾವಲುಗಾರರಿದ್ದರು. "ಯಾರಯ್ಯಾ, ಈ ಬಾಗಿಲಿಗೆ ಬೀಗ ಹಾಕಿದ್ದೀರೇಕೆ? ತೆಗೆಯಿರಿ. ನಾನು ಆ ಕಡೆ ಹೋಗಬೇಕು" ಎಂದ ಬಾಲಕ.

"ಆ ಕಡೆ ಹೋಗುವುದನ್ನು ನಿಲ್ಲಿಸಿದ್ದಾರೆ. ಪೂರ್ವ ದಿಕ್ಕಿನಿಂದ ಹೋಗು."

"ನಾನು ಹೀಗೇ ಹೋಗಬೇಕು" ಎಂದ ಬಾಲಕ. "ಮಗೂ, ಇದ್ದ ಮಾತು ಹೇಳದಿದ್ದರೆ ನಮಗೆ ಪಾಪ ಸುತ್ತಿಕೊಳ್ಳುತ್ತದೆ. ಇಲ್ಲಿಗೆ ಸಮೀಪದಲ್ಲಿ ಸೀ ನೀರಿನ ಭಾವಿಯ ಹತ್ತಿರ ಒಂದು ದೊಡ್ಡ ಹುಲಿ ಇದೆ. ಸಿಕ್ಕಿದವರನ್ನೆಲ್ಲಾ ಸಾಯಿಸಿ ತಿನ್ನುತ್ತದೆ" ಎಂದರು ಕಾವಲುಗಾರರು.

"ಎಲ್ಲಿ ಆ ಹುಲಿಯನ್ನು ಒಂದು ಸಾರಿ ನೋಡೋಣ, ಬಾಗಿಲು ತೆಗೆಯಿರಿ" ಎಂದ ಬಾಲಕ.

ಕಾವಲುಗಾರರು ಬಾಗಿಲು ತೆಗೆದು, ಬಾಲವರ್ಧಿರಾಜನು ಹೊರಗೆ ಹೋದೊಡನೆ ಮೊದಲಿನಂತೆ, ಬಾಗಿಲಿಗೆ ಬೀಗ ಹಾಕಿದರು.

ಬಾಲವರ್ಧಿರಾಜನು ಹುಲಿಯನ್ನು ಹುಡುಕುತ್ತಾ ಸೀ ನೀರಿನ ಬಾವಿಯ ಹತ್ತಿರಕ್ಕೆ

ಹೋದನು. ಹುಲಿ ಆಹಾರವನ್ನು ಹುಡು ಕುತ್ತಾ ಬರುತ್ತಿತ್ತು. ಬಾಲಕನನ್ನು ನೋಡಿ ಅಬ್ಬರಿಸುತ್ತಾ ಅವನ ಮೇಲೆ ಹಾರಿತು. ಬಾಲಕನು ಚಂದ್ರಾಯುಧವನ್ನು ಹಿರಿದು, ಅದರ ಕೊರಳಲ್ಲಿ ತಿವಿದನು. ಹುಲಿಯು ಧೊಪ್ಪನೆ ಬಿದ್ದು ಒದ್ದಾಡಿ ಪ್ರಾಣ ಬಿಟ್ಟಿತು. ಬಾಲಕನು ಅದರ ಉಗುರುಗಳನ್ನೂ, ಬಾಲದ ಕೊನೆಯನ್ನೂ ಕತ್ತರಿಸಿಕೊಂಡು ಪೂರ್ವದ ಬಾಗಿಲಿಂದ ಪಟ್ಟಣ ಪ್ರವೇಶಿಸಿ ಅಡಗೂಲಜ್ಜಿಯ ಮನೆ ಸೇರಿಕೊಂಡನು.

"ಎಲ್ಲಿಗೆ ಹೋಗಿದ್ದೆ ಮಗೂ" ಎಂದಳು ಅಜ್ಜಿ. "ಊರು ನೋಡಲು ಹೋಗಿದ್ದೆ. ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ. ಇನ್ನೂ ಎರಡು ದಿನಗಳಿರಬೇಕು" ಎಂದ ಬಾಲಕ.

ಇದು ಹೀಗಿರುವಲ್ಲಿ, ಆ ಪಟ್ಟಣದಲ್ಲಿ ತಿಪ್ಪನೆಂಬ ಒಬ್ಬ ಅಗಸರವನಿದ್ದನು. ಅವನು ಶುದ್ಧ ಸೋಮಾರಿ, ಮೈಗಳ್ಳ. ಮೂರು ತಿಂಗಳಿಗೊಮ್ಮೆಯಾದರೂ. ಬಟ್ಟೆಗಳನ್ನು ಒಗೆದು ಮಡಿ ಮಾಡುತ್ತಿರಲಿಲ್ಲ. ಯಾವಾಗಲೂ ಕಂಠ ಪೂರ್ತಿ ಸಾರಾಯಿ ಕುಡಿದು ಮೈಮರೆತು ಇರುತ್ತಿದ್ದನು.

ಆ ದಿನ ಅವನು ಎಂದಿನಂತೆ ಮೂಗಿನ ವರೆವಿಗೂ ಕುಡಿದು ಊರಿನೊಳಕ್ಕೆ ಬರುತ್ತಾ ದಾರಿ ತಿಳಿಯದೆ ಸೀ ನೀರಿನ ಭಾವಿಯ ಹತ್ತಿರಕ್ಕೆ ಬಂದನು. ಅಲ್ಲಿ ದಾರಿಗಡ್ಡವಾಗಿ





ಹುಲಿ ಕಾಣಿಸಿತು. ಅಮಲಿನಲ್ಲಿ ಅವನಿಗೆ ಭಯವಾಗಲಿಲ್ಲ. ಕೈಯಲ್ಲಿದ್ದ ದೊಣ್ಣೆಯಿಂದ ನಾಲ್ಕು ಬಾರಿಸಿದ.

ಹುಲಿ ಕದಲಲಿಲ್ಲ. ಬಗ್ಗಿ ನೋಡಿದ. ಸತ್ತ ಹಾಗೆ ಕಂಡುಬಂತು. ಕಾಲಿನಿಂದ ಒದ್ದು ನೋಡಿದ. ನಿಜವಾಗಿ ಸತ್ತಿತ್ತು.

ತಿಪ್ಪ ಆನಂದದಿಂದ "ಭಲೆ! ನಾ ರಾಜನ ಮಗಳನ್ನ ಮದ್ವೆ ಆಗ್ತೀನಿ. ರಾಜನಾಗ್ತೀನಿ, ಜನವೆಲ್ಲಾ ನನ್ಕಾಲ್ಗೆ ದಮ್ಮಯ್ಯ ಹಾಕ್ತಾರೆ" ಎಂದು ನೆಗೆಯುತ್ತಾ ರಾಜನ ಆಸ್ಥಾನದ ಕಡೆಗೆ ಓಡಿದ. ದಾರಿಯಲ್ಲಿ ಅವನನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಯಾರಾದರೂ ಅಡ್ಡ ಬಂದರೆ ಅವರನ್ನು ನೂಕಿ, ಓಡುತ್ತಾ ದಿವಾಣ ಖಾನೆಯನ್ನು ಸೇರಿದ. ರಾಜನಿಗೆ ನಮಸ್ಕಾರ ಮಾಡಿ "ದೇವ್ರೂ ಲಾಲಿಸ್ಬೇಕು. ಶೀ ನೀರಿನ ಬಾವೀ ತಾವ ಇದ್ದ ವುಲೀನಾ ನಾ ಕೊಂದುಬಿಟ್ಟೆ. ನಿಮ್ಮ ಮಗಳ್ನ ನಮಗಿತ್ತು ಮದ್ವೆ ಮಾಡಿ" ಎಂದ.

ಆ ಮಾತನ್ನು ಕೇಳಿ ರಾಜ ಮತ್ತು ಆತನ ಬಂಧುಗಳು ನಿರ್ಘಾಂತರಾದರು. ಶೂರಾದಿ ಶೂರರು ಸಾಯಿಸಲಾರದ ಹುಲಿಯನ್ನು ಈ ಹೆಂಡಕುಡುಕ ಸಾಯಿಸುವನೆಂದು ಯಾರು ಕನಸು ಕಂಡಿದ್ದರು? ರಾಜಕುಮಾರಿಯನ್ನು ತಿಪ್ಪನಿಗೆ ಕೊಟ್ಟು ಮದುವೆ ಮಾಡುವುದು ಹೇಗೆ? ಆಡಿದ ಮಾತು ತಪ್ಪುವುದು ಹೇಗೆ?

ರಾಜಭಟರು ಹೋಗಿ ಸತ್ತು ಬಿದ್ದಿದ್ದ ದೊಡ್ಡ ಹುಲಿಯನ್ನು ಪರೀಕ್ಷಿಸಿದರು. ಹುಲಿ ಸತ್ತ ಮಾತು ನಿಜವೆಂದಾಯಿತು. ಅಗಸರ ತಿಪ್ಪ ಹುಲಿಯನ್ನು ಕೊಂದನಾದ್ದರಿಂದ, ಒಳ್ಳೆ ಮುಹೂರ್ತ ನೋಡಿ ಅವನಿಗೆ ರಾಜಕುಮಾರಿ ಸುಭದ್ರಾದೇವಿಯನ್ನು ಕೊಟ್ಟು ಮದುವೆ ಮಾಡುವೆವೆಂದು ರಾಜ ಪ್ರಕಟಿಸಿದನು.

ರಾಜನ ಮನೆಯಲ್ಲಿ ಯಾರ ಮುಖದಲ್ಲೂ ಆನಂದವಿರಲಿಲ್ಲ. ಸಂಭ್ರಮವೆಲ್ಲಾ ಅಗಸರ ತಿಪ್ಪನದು! ತನ್ನ ಹೆಂಡತಿಯನ್ನು ಸದೆ ಬಡಿದು, ಬಂಧುಗಳೆಲ್ಲರನ್ನೂ ಕರೆಸಿ, ಎಲ್ಲರಿಗೂ ಕಳ್ಳು ಕೊಟ್ಟು, ತನ್ನ ಮನೆಯಲ್ಲಿ ಬೆಳಗಿನವರೆವಿಗೂ ದರ್ಬಾರು ನಡೆಸಿದ್ದ!

ಅಡಗೂಲಜ್ಜಿಯ ಮನೆಯಲ್ಲಿ ಬಾಲವದ್ದಿ ರಾಜ ತುಂಬಾ ಬಳಲಿದ್ದನಾದ್ದರಿಂದ ಊಟ



ಮುಗಿಸಿಕೊಂಡು ನಿದ್ದೆ ಮಾಡಿದನು. ಅಡಗೂಲಜ್ಜಿಗೆ ಏನೋ ಅನುಮಾನ. ಈ ಬಾಲಕನು ಏನೋ ಸಾಹಸಕಾರ್ಯ ಮಾಡಿ ಬಂದಿದ್ದಾನೆ ಎಂಬ ಸಂದೇಹ. ಇಷ್ಟರಲ್ಲಿ ಅಗಸರ ತಿಪ್ಪನು ಹುಲಿಯನ್ನು ಕೊಂದ ಸಮಾಚಾರ ತಿಳಿಯಿತು. ಬಾಲಕನು ನಿದ್ದೆ ಮಾಡುತ್ತಿರುವಾಗ ಅಜ್ಜಿ ಆತನ ಚಂದ್ರಾಯುಧವನ್ನು ತೆಗೆದು ಪರೀಕ್ಷೆ ಮಾಡಿದಳು. ಅಜ್ಜಿಯ ಸಂದೇಹ ಬಲವಾಯಿತು. ಪಕ್ಕದಲ್ಲಿದ್ದ ಮೂಟೆ ಬಿಚ್ಚಿ ನೋಡಿದರೆ ಅದರಲ್ಲಿ ಹುಲಿಯ ಉಗುರುಗಳು ಮತ್ತು ಬಾಲದ ತುಂಡುಗಳು ಕಾಣಿಸಿದುವು. ಅರ್ಧ ರಾತ್ರಿಯಲ್ಲಿ ಅಜ್ಜಿ ಈ ಸಾಕ್ಷ್ಯಗಳೊಡನೆ ರಾಜನ ಆಸ್ಥಾನಕ್ಕೆ ಹೋದಳು.

ಬೆಳಗಾಗುವ ವೇಳೆಗೆ ರಾಜ ಭಟರು ಬಂದು ತಿಪ್ಪನ ಕೈ ಕಾಲು ಕಟ್ಟಿ ಸೆರೆಮನೆಗೆ ಕೊಂಡೊಯ್ದರು. ಅದೇ ಸಮಯಕ್ಕೆ ಅಡಗೂಲಜ್ಜಿಯ ಮನೆಗೆ ರಾಜನು ಪಲ್ಲಕ್ಕಿಯಲ್ಲಿ ಬಂದು, ಬಾಲವದ್ಧಿರಾಜನನ್ನು ಕುಳ್ಳಿರಿಸಿಕೊಂಡು ತನ್ನ ಅರಮನೆಗೆ ಕರೆದುಕೊಂಡು ಹೋದನು. ಅಲ್ಲಿ ಆತನಿಗೆ ಸಕಲ ಮರ್ಯಾದೆಗಳನ್ನು ಮಾಡಿದನು.

ಹುಲಿರಾಜಪಟ್ಟಣದ ಅರಸು ತನಗೆ ಸುಭದ್ರೆಯನ್ನು ಕೊಟ್ಟು ವಿವಾಹ ಮಾಡುವನೆಂದು ಬಾಲವದ್ಧಿರಾಜನಿಗೆ ತಿಳಿಯಿತು. ಕೂಡಲೇ "ನಾನು ನಮ್ಮ ತಾಯಿಯನ್ನು ಸೆರೆಯಿಂದ ಬಿಡಿಸಲು ಹೋಗುತ್ತಿರುವೆನು. ಆದ್ದರಿಂದ ಈಗ ಮದುವೆಯಾಗುವುದು ಉಚಿತವಲ್ಲ. ನಮ್ಮ ತಾಯಿಯೊಂದಿಗೆ ಮರಳಿ ಬರುವಾಗ ಇಲ್ಲಿ ತಂಗಿದ್ದು ಮದುವೆ ಮಾಡಿಕೊಂಡು ಊರಿಗೆ ಹೋಗುವೆನು" ಎಂದನು.

ಆ ಬಾಲಕನು ಹೇಳಿದ ಮಾತಿಗೆ ರಾಜನು ಒಪ್ಪಿದನು. ನಾಗಭಟ್ಟನೆಂಬ ಬ್ರಾಹ್ಮಣನನ್ನು ಜೊತೆಗಾಗಿ ಕೊಟ್ಟುಕಳುಹಿಸಿದನು. ಹುಲಿರಾಜ ಪಟ್ಟಣಕ್ಕೂ ಗಂಗವತಿ ಪಟ್ಟಣಕ್ಕೂ ಹನ್ನೆರಡು ಗಾವುದ ದೂರ. ಎರಡು ಗಂಟೆಯಾಗುವವರೆವಿಗೂ ಇಬ್ಬರೂ ನಡೆದರು. ಬಾಲಕನಿಗೆ ಬಾಯಾರಿಕೆ ಆಯಿತು. ಬ್ರಾಹ್ಮಣನು ಒಂದು ಪಾಳು ಬಾವಿಯ ಹತ್ತಿರ ಕರೆದುಕೊಂಡು ಹೋದನು.

ಆ ಬಾವಿಯಲ್ಲಿ ನೀರು ತುಂಬಾ ಆಳದಲ್ಲಿತ್ತು. ಸುತ್ತಲೂ ಮುಳ್ಳು ಪೊದೆಗಳು ತುಂಬಿದ್ದವು. ನೀರು ಸೇದಲು ತಿರಗಣೆಯಿರಲಿಲ್ಲ. ಆದ್ದರಿಂದ ಬಾಲವದ್ದಿರಾಜನ ರುಮಾಲನ್ನು ಸೊಂಟಕ್ಕೆ ಬಿಗಿದು ಮೊದಲು ಬ್ರಾಹ್ಮಣನು ಬಾವಿಯೊಳಕ್ಕೆ ಇಳಿದು ನೀರು ಕುಡಿದು ಮೇಲಕ್ಕೆ ಬಂದನು.

ಹೊರಗೆ ಬಂದು ಬ್ರಾಹ್ಮಣನು "ಮಗೂ, ಬಾವಿ ತುಂಬಾ ಆಳವಾಗಿದೆ. ಉದ್ದಕ್ಕೂ ಮುಳ್ಳು ಪೊದರುಗಳಿವೆ. ನಿನ್ನ ಆಭರಣ ಮತ್ತು ಕತ್ತಿಯನ್ನು ಕಳಚಿ ಇಟ್ಟು ಕೆಳಕ್ಕೆ ಇಳಿ. ಇಲ್ಲದಿದ್ದರೆ ತೊಂದರೆಯಾಗಬಹುದು.'' ಎಂದು ಹೇಳಿದನು. ಬಾಲಕನು ಬ್ರಾಹ್ಮಣನ ಮಾತುಗಳನ್ನು ನಂಬಿ ತನ್ನ ಆಭರಣಗಳನ್ನೂ ಮತ್ತು ಆಯುಧವನ್ನೂ ತೆಗೆದು ಕಟ್ಟೆಯ ಮೇಲಿಟ್ಟನು. ಸೊಂಟಕ್ಕೆ ರುಮಾಲು ಬಿಗಿದು ಇಳಿದನು. ಬಾಲಕನು ಇಳಿದಿದ್ದೇ ತಡ, ಬ್ರಾಹ್ಮಣನು ಕತ್ತಿಯಿಂದ ರುಮಾಲನ್ನು ಕತ್ತರಿಸಿ ಬಾಲಕನ ವಸ್ತುಗಳನ್ನು ಅಪಹರಿಸಿಕೊಂಡು ಗಂಗವತಿ ಪಟ್ಟಣಕ್ಕೆ ಹೋದನು. ಆ ಆಭರಣಗಳನ್ನು ವಾರಸ್ತ್ರೀಯರಿಗೆ ಕೊಟ್ಟು, ವಿಲಾಸದೊಡನೆ ಕಾಲ ಕಳೆಯುತ್ತಿದ್ದನು.

ಕೆಲ ದಿನಗಳಲ್ಲಿ ಬ್ರಾಹ್ಮಣನ ಹಣ ತೀರಿ ಹೋಯಿತು. ಗತಿಯಿಲ್ಲದೆ ಹೊಟ್ಟೆ ಹೊರೆದುಕೊಳ್ಳಲು, ಗೋಪಾಲಸ್ವಾಮಿ ಗುಡಿಯ ಪಕ್ಕದಲ್ಲಿದ್ದ ರಥದ ಹತ್ತಿರ ಯಾಚನೆಗೆ ಆರಂಭಿಸಿದನು.



ನಾಗಭಟ್ಟನು ರುಮಾಲು ಕತ್ತರಿಸಿದಾಗ ನೀರಿನಲ್ಲಿ ಬಿದ್ದ ಬಾಲವದ್ದಿರಾಜ ನಿದ್ರಾಹಾರಗಳಿಲ್ಲದೆ ಆ ಬಾವಿಯಲ್ಲಿ ಅನೇಕ ದಿನ ಉಳಿದಿದ್ದನು. ಎಷ್ಟು ಕೂಗಿಕೊಂಡರೂ ಆ ಕಾಡಿನಲ್ಲಿ ಕೇಳುವವರಿಲ್ಲ. ಇಷ್ಟರಲ್ಲಿ ಒಂದು ದಿನ ಗಂಗವತಿ ಪಟ್ಟಣದ ರಾಜ ಬೇಟೆಯಾಡಲು ಅಡವಿಗೆ ಹೋದನು. ಬೇಟೆನಾಯಿಗಳಿಗೆ ನೀರು ಕುಡಿಸಲು ಆ ಪಾಳುಬಾವಿಯ ಹತ್ತಿರಕ್ಕೆ ಪರಿವಾರಸಮೇತವಾಗಿ ಬಂದನು. ರಾಜನ ನೌಕರರು ಚೊಂಬಿಗೆ ರುಮಾಲು

ಕಟ್ಟಿ ಬಾವಿಯಲ್ಲಿ ಹಾಕಿದರು. ಚೆಂಬನ್ನು ಮೇಲಕ್ಕೆ ಎಳೆಯ ಹೋದರೆ ಬಹಳ ಭಾರವಾಗಿ ಕಂಡುಬಂತು. ನೌಕರರೆಲ್ಲರೂ ಬಹಳ ಆಶ್ಚರ್ಯಪಟ್ಟರು. ಅವರ ಪುಣ್ಯದಿಂದ ಬಾಲವದ್ದಿರಾಜ ಹೊರಕ್ಕೆ ಬಂದನು.

ಆತನನ್ನು ಗಂಗವತಿ ರಾಜನು ತನ್ನ ಪಟ್ಟಣಕ್ಕೆ ಕರೆದುಕೊಂಡುಹೋಗಿ, ಆತನ ಸಮಾಚಾರವನ್ನೆಲ್ಲಾ ಕೇಳಿ ತಿಳಿದನು. ಬಾಲಕನು ಎಲ್ಲ ವಿಷಯವನ್ನು ಹೇಳಿ ತಾನು ಹುಲಿರಾಜ ಪಟ್ಟಣದಿಂದ ಬರುತ್ತಿರುವಾಗ್ಗೆ, ಸುಂಟರಗಾಳಿಗೆ ಸಿಕ್ಕಿ ಬಾವಿಯಲ್ಲಿ ಬಿದ್ದೆನೆಂದು ಹೇಳಿದನು. ಗಂಗವತಿ ರಾಜ ತನ್ನ ಮಗಳನ್ನು ಈ ಬಾಲಕನಿಗೆ ಕೊಟ್ಟು ಮದುವೆ ಮಾಡುವೆನೆಂದನು. ಅದಕ್ಕೆ ಬಾಲಕನು ತನ್ನ ತಾಯಿಯನ್ನು ಮಾಯಾಫಕೀರನ ಸೆರೆಯಿಂದ ಬಿಡಿಸುವವರೆಗೂ ಮದುವೆ ಮಾಡಿಕೊಳ್ಳುವುದಿಲ್ಲವೆಂದೂ ತಾನು ತಾಯಿಯೊಂದಿಗೆ ಹಿಂತಿರುಗಿ ಬರುವಾಗ ಮದುವೆಯಾಗುವೆನೆಂದೂ ಹೇಳಿ ರಾಜನನ್ನು ಒಪ್ಪಿಸಿದನು.

ಒಂದು ದಿನ ರಾಜನು ಬಾಲವದ್ದಿರಾಜನಿಗೆ ಗೋಪಾಲಸ್ವಾಮಿ ದೇವಸ್ಥಾನವನ್ನು ತೋರಿಸಲು ಕರೆದುಕೊಂಡುಹೋದನು. ಅಲ್ಲಿ ರಥದ ಹತ್ತಿರ ಕುಳಿತುಕೊಂಡಿದ್ದ ಬ್ರಾಹ್ಮಣನನ್ನು ನೋಡಿ ಬಾಲಕನು "ನಮಸ್ಕಾರ, ನಾಗಭಟ್ಟರೇ" ಎಂದನು. ಬ್ರಾಹ್ಮಣನ ಮುಖ ಬಿಳಿಚಿಕೊಂಡಿತು.

ಬಾಲವದ್ದಿರಾಜನು ಮಹಾರಾಜರಿಗೆ ಹೇಳಿ ಬ್ರಾಹ್ಮಣನಿಗೆ ಬಹಳ ಸಹಾಯ ಮಾಡಿಸಿದನು. ಮರುದಿನ ಬಾಲಕನು ರಾಜನಿತ್ತ ಕಾಣಿಕೆಗಳನ್ನು ತೆಗೆದುಕೊಂಡು ಮತ್ತೆ ಪ್ರಯಾಣ ಮಾಡಿದನು. ಹಗಲೆಲ್ಲಾ ನಡೆದು ಇನ್ನೇನು ಗಿಳಿವತಿ ಪಟ್ಟಣಕ್ಕೆ ಸ್ವಲ್ಪ ದೂರವಿರುವಾಗ ಕತ್ತಲಾಯಿತು. ಅಲ್ಲೇ ಇದ್ದ ಒಂದು ಪಾಳು ದೇಗುಲದಲ್ಲಿ ಮಲಗಿಕೊಂಡನು. ಆದರೆ ಹಸಿವಿನ ಬಾಧೆಯಿಂದ ಆತನಿಗೆ ನಿದ್ದೆ ಬರಲಿಲ್ಲ.

ಮಧ್ಯೆ ರಾತ್ರಿಯಲ್ಲಿ ಒಂದು ನರಿ, ಒಂದು ಹುಲಿ ದೇವಾಲಯದ ಸಮೀಪದಲ್ಲಿ ಸೇರಿ ಮಾತನಾಡಲು ಮೊದಲು ಮಾಡಿದುವು. ಬಾಲವದ್ದಿರಾಜನು ಅದರ ಸಂಭಾಷಣೆ ಕೇಳುತ್ತಿದ್ದನು.

[ಮುಂದುವರಿಯುವುದು]






ಪೂರ್ವಕಾಲದಲ್ಲಿ ಒಬ್ಬ ಹರಿದಾಸರಿದ್ದರು. ಅವರು ಒಬ್ಬ ಮೃದಂಗದವನನ್ನೂ ಇನ್ನೊಬ್ಬ ಪಿಟೀಲು ಬಾರಿಸುವವನನ್ನೂ ಜೊತೆ ಮಾಡಿಕೊಂಡು ಊರೂರು ಸುತ್ತುತ್ತಾ ಹರಿಕಥೆ ಮಾಡುತ್ತಿದ್ದರು. ಅವರು ಒಂದು ಗ್ರಾಮಕ್ಕೆ ಹೋಗಿ ಅಲ್ಲಿಯ ಮುಖಂಡರನ್ನು ಕಂಡು ತಾವು ಬಂದ ಕಾರ್ಯ ಕುರಿತು ಹೇಳಿದರು. ಗ್ರಾಮಸ್ತರೆಲ್ಲರೂ ಉತ್ಸಾಹದಿಂದ ಆ ದಾಸರಿಂದ ಎಡೆಬಿಡದೆ ನಲವತ್ತು ರಾತ್ರಿ ಸಂಪೂರ್ಣ ರಾಮಾಯಣ ಕೀರ್ತನೆ ಮಾಡಿಸಲು ಏರ್ಪಾಟು ಮಾಡಿದರು.

ಆದರೆ ಹರಿದಾಸರಿಗೂ ಆ ವಾದ್ಯಗಾರರಿಗೂ ನಲವತ್ತು ದಿವಸ ಯಾರು ಊಟ ಒದಗಿಸಬೇಕೆಂಬ ಪ್ರಶ್ನೆ ಬಂತು. ಹರಿಕಥೆ ಎಂದರೆ ಪೇರಿಭಟ್ಟರಿಗೆ ತುಂಬಾ ಆಶೆ. ಅವರು ತಟ್ಟನೆದ್ದು "ಇದೇನು ಮಹಾ ಸಮಸ್ಯೆ. ನಾನು ಈ ಊರಲ್ಲಿರುವಾಗ ಹರಿದಾಸರು ಬೇರೆ ಕಡೆ ತಂಗಲು ಸಾಧ್ಯವಿಲ್ಲ" ಎಂದು ಖಂಡಿತವಾಗಿ ಹೇಳಿದರು. ಭಟ್ಟರು ಹರಿದಾಸರಿಗೆ ತೋರಿಸಿದ ಗೌರವಕ್ಕೆ ಎಲ್ಲರೂ ಮೆಚ್ಚಿಕೊಂಡರು. ದಾಸರೂ ಸಂತೋಷಪಟ್ಟರು.

ಪೇರಿಭಟ್ಟರ ಹೆಂಡತಿ ಪಿಳ್ಳಮ್ಮ. ಆಕೆಗೆ ನೆರೆ ಹೊರೆಯ ಮನೆಗಳಿಗೆ ಊಟಕ್ಕೆ ಹೋಗುವುದೆಂದರೆ ಸಂತೋಷವೇ ಹೊರತು ಮತ್ತೊಬ್ಬರನ್ನು ಕರೆದು ಅನ್ನವಿಡುವುದೆಂದರೆ ಆಗದು. ಮೂವರಿಗೆ ನಲವತ್ತು ದಿವಸ! ಎರಡು ಹೊತ್ತು!! ಅಡಿಗೆಮಾಡಿ ಬಡಿಸಬೇಕೆಂಬ ವಿಚಾರ ಕೇಳಿ ಆಕೆಯ ಹೃದಯ ಕುಗ್ಗಿತು. 'ನಾನು ಮಾಡಲಾರೆ' ಎಂದರೆ ಗಂಡ ಒಪ್ಪಲಾರ. ಅವರಷ್ಟಕ್ಕೆ ಅವರೇ ಓಟ ಕೀಳುವ ಉಪಾಯ ಯೋಚಿಸಿದಳು.

"ಇಂದು ಏನು ಅಡಿಗೆಮಾಡುವೆ" ಎಂದು ಕೇಳಿದರು ಭಟ್ಟರು. "ಇಂದೇ ಮೊದಲನೆಯ ದಿನ. ಒಳ್ಳೆ ಭರ್ಜರಿ ಔತನವೇರ್ಪಡಿಸೋಣ. ಗೋಧೀ ಹಿಟ್ಟು, ಸಕ್ಕರೆ, ತುಪ್ಪ ತೆಗೆದುಕೊಂಡು ಬನ್ನಿ" ಎಂದಳು. ಭಟ್ಟರು "ಅನುಕೂಲ ದಾಂಪತ್ಯವೆಂದರೆ ಹೀಗೇ ಇರಬೇಕು" ಎಂದು ಎಲ್ಲಪದಾರ್ಥಗಳನ್ನು ಕೊಂಡು ತಂದರು.

ಎ. ಎಂ. ಶ್ರೀನಿವಾಸನ್, ಬೆಂಗಳೂರು.



ಎಂದಳು. "ಪರವಾಯಿಲ್ಲ, ಬಿಡು" ಎಂದು ಭಟ್ಟರು ಕೈಯಲ್ಲಿ ಚಾಕು ಹಿಡಿದು ಊರ ಹೊರಗೆ ಕಾಲುವೆಯ ಪಕ್ಕದಲ್ಲಿದ್ದ ಬಾಳೆಯ ತೋಟಕ್ಕೆ ಹೊರಟರು.

ಗಂಡ ತಂದ ಗೋಧಿ ಹಿಟ್ಟನ್ನು ಕಲೆಸಿ ಪಾಕಮಾಡಿದಳು. ಸ್ವಲ್ಪ ಆ ಮುದ್ದೆಯನ್ನು ಉಳಿಸಿ ಅದರಿಂದ ಮನುಷ್ಯರಂತೆ ಮೂರು ಆಕೃತಿಗಳನ್ನು ಮಾಡಿ, ಅವನ್ನು ಒಂದು ಮಣೆಯಮೇಲೆ ಸಾಲಾಗಿರಿಸಿದಳು. ಪಿಳ್ಳಮ್ಮ ನಿಗೆ ನಾಲ್ಕು ಜನ ಮಕ್ಕಳು. ಹಿಟ್ಟಿನ ಬೊಂಬೆಗಳನ್ನು ನೋಡಿ ಆ ಹುಡುಗರು "ಅಮ್ಮಾ, ಇವರು ಯಾರಮ್ಮಾ?" ಎಂದು ಕೇಳಿದರು.

ಆಗ ಪಡಸಾಲೆಯಲ್ಲಿದ್ದ ಮೂವರು ದಾಸರಿಗೂ ಕೇಳಿಸುವ ಹೇಗೆ "ಮೊದಲನೇ ಆತ ಹರಿದಾಸ, ಎರಡನೇ ಆತ ಮೃದಂಗ ದಾಸ, ಮೂರನೇಯವ ಪಿಟೀಲುದಾಸ" ಎಂದು ಆ ಬೊಂಬೆಗಳಿಗೆ ಹೆಸರಿಟ್ಟು ಹೇಳಿದಳು, ಪಿಳ್ಳಮ್ಮ. ದಾಸರಿಗೆ ಮನೆಯೊಳಗಿರುವ ಬೊಂಬೆಗಳ ವಿಷಯ ತಿಳಿಯದು. ತಮ್ಮ ವಿಷಯವನ್ನೇ ಆಕೆ ಮಕ್ಕಳಿಗೆ ಹೇಳುತ್ತಿರುವಳೆಂದುಕೊಂಡರು.

ಮಕ್ಕಳು ಮತ್ತೆ ಆ ಬೊಂಬೆಗಳ ಕಡೆ ತೋರಿಸುತ್ತಾ "ಇವರನ್ನೇನು ಮಾಡುವೆಯಮ್ಮಾ?" ಎಂದು ಕೇಳಿದರು. ಪಿಳ್ಳಮ್ಮ ಹೇಳಿದಳು. "ಕಾದು ಕುತಕುತನೆ ಕುದಿಯುವ ಎಣ್ಣೆಯಲ್ಲಿ ಹಾಕಿ ಮೂವರನ್ನೂ ಹದವಾಗಿ ಬೇಯಿಸುತ್ತೇನೆ."

ಪಿಳ್ಳಮ್ಮ ಅಡಿಗೆಮಾಡುತ್ತಿದ್ದರೆ ಭಟ್ಟರು ಮೂವರು ದಾಸರನ್ನೂ ಸ್ವಲ್ಪಹೊತ್ತು ಮುಂಚೆಯೇ ಕರೆದುಕೊಂಡು ಬಂದು ಅವರನ್ನು ಪಡಸಾಲೆಯಲ್ಲಿ ಕೂರಿಸಿದರು. ಅವರಿಂದ ಕೆಲವು ಪದಗಳನ್ನು ಹಾಡಿಸಿದರು. ಅವರು ಹಾಡುತ್ತಿದ್ದರೆ ಭಟ್ಟರು ತಾಳ ಹಾಕ ತೊಡಗಿದರು.

ಪಿಳ್ಳಮ್ಮ ತಮ್ಮ ಸಂಸಾರಕ್ಕೆ ಮಾತ್ರ ಸರಿಹೋಗುವಷ್ಟು ಮಾಮೂಲು ಅಡಿಗೆ ಮಾಡಿ ಗಂಡನನ್ನು ಕುರಿತು "ಏನೂಂದ್ರೆ. ಅಡಿಗೆ ಆಯ್ತು. ಸ್ನಾನಕ್ಕೆ ಏಳಿ" ಎಂದಳು. ಆತನು ದಾಸರಿಗೆ ಮಡಿ ಉಟ್ಟುಕೊಳ್ಳುವಂತೆ ಹೇಳುವ ಸಮಯಕ್ಕೆ ಸರಿಯಾಗಿ ಪಿಳ್ಳಮ್ಮ "ಅಯ್ಯೊ, ನನ್ನ ಬುದ್ಧಿ ಹಾಳಾಗಿಹೋಗಾ, ಊಟದೆಲೆಯ ವಿಚಾರವೇ ಮರೆತೆನೆಲ್ಲಾ"

ಆ ಮಾತುಗಳನ್ನು ಕೇಳಿದ ದಾಸರು ಮೂವರೂ ಬೆಚ್ಚಿಬಿದ್ದರು. ಮತ್ತೆ ಇನ್ನೇನು ಹೇಳುವಳೋ ಎಂದು ಕಿವಿಕೊಟ್ಟು ಕೇಳಲಾರಂಭಿಸಿದರು.

"ಬೇಯಿಸಿದ ತರುವಾಯ ಮೂವರನ್ನೂ ಪಾಕಮಾಡಿ ನಿಮಗೆ ತಿನ್ನಲಿಡುವೆನು" ಎಂದು ದಾಸರಿಗೆ ಚೆನ್ನಾಗಿ ಕೇಳುವಂತೆ ಮಕ್ಕಳಿಗೆ ಹೇಳಿದಳು.

ದೊಡ್ಡ ಹುಡುಗನೂ ಮೊದಲನೇ ಬೊಂಬೆಯನ್ನು ತೋರಿಸುತ್ತ "ಅಮ್ಮಾ ನಾನು ಆ ಹರಿದಾಸರನ್ನು ತಿನ್ನುವೆನು" ಎಂದ. ಎರಡನೇಯವನು ನಾನು ಮೃದಂಗದಾಸನನ್ನು ತಿನ್ನುತ್ತೇನೆ" ಎಂದ. ಮೂರನೇಯವನು "ಹಾಗಾದರೆ ಪಿಟೀಲು ದಾಸ ನನಗೇ ಸಿಕ್ಕುತ್ತಾನೆ." ಎಂದು ಅರಚಿದ.

ಈ ಮಾತುಗಳನ್ನು ಕೇಳುತ್ತಿದ್ದ ದಾಸರಿಗೆ ನಡುಕ ಉಂಟಾಯಿತು.

ಇಷ್ಟರಲ್ಲಿ ಪಿಳ್ಳಮ್ಮನ ನಾಲ್ಕನೆಯ ಮಗ ಬಂದು "ಅಮ್ಮಾ ನನಗ್ಯಾರನ್ನು ಕೊಡುತ್ತೀಯಮ್ಮಾ! ಈ ದಾಸರನ್ನು ಅಣ್ಣಂದಿರಿಗೆ ಕೊಡಬೇಡ. ಮೂವರನ್ನೂ ನಾನೇ ನುಂಗಿಬಿಡುತ್ತೇನೆ" ಎಂದು ಚಂಡಿ ಹಿಡಿದ. ಈ ಮಾತುಗಳನ್ನು ಕೇಳಿ ಪಡಸಾಲೆಯಲ್ಲಿದ್ದ ದಾಸರ ಅನುಮಾನ ಪರಿಹಾರವಾಯಿತು. ಅದು ಬ್ರಹ್ಮರಾಕ್ಷಸಿಯ ಮನೆಯೇ ಇರಬೇಕೆಂದುಕೊಂಡು, ಅಲ್ಲಿದ್ದರೆ ಅವರು ನಿಜವಾಗಿ ತಮ್ಮನ್ನು ತಿಂದುಬಿಡುವರೆಂದು ಹೆದರಿ ಮೂವರೂ ಓಟಕಿತ್ತರು. ಪಕ್ಕದ ಊರು



ಸೇರುವವರೆವಿಗೂ ಅವರು ತಿರುಗಿಯೂ ನೋಡಲಿಲ್ಲ.

ಭಟ್ಟರು ಬಾಳೆ ಎಲೆಗಳೊಂದಿಗೆ ಮನೆಗೆ ಬಂದು "ದಾಸರೆಲ್ಲಿ?" ಎಂದು ಹೆಂಡತಿಯನ್ನು ಕೇಳಿದರು. ಏನೂ ಅರಿಯದವಳಂತೆ "ಪಡಸಾಲೆಯಲ್ಲಿಲ್ಲವೇ" ಎಂದು ಪ್ರೀತಿಯಾಗಿ ಪ್ರಶ್ನೆ ಕೇಳಿದಳು. ಅವರು ಹೊರಗೆ ಹೋಗಿರಬಹುದೆಂದು ಭಟ್ಟರು ಬಹಳ ಹೊತ್ತು ಕಾದುಕುಳಿತುಕೊಂಡಿದ್ದರು, ಪಾಪ. ಬಹಳ ಸಮಯವಾದರೂ ದಾಸರು ಬರದಿದ್ದರಿಂದ ಊಟಕ್ಕೆ ಎದ್ದರು. ಆ ದಾಸರು ಹಠಾತ್ತಾಗಿ ಏಕೆ ಹೊರಟು ಹೋದರೋ ಎಲ್ಲಿಗೆ ಹೋದರೋ ಭಟ್ಟರಿಗಾಗಲೀ ಆ ಗ್ರಾಮಸ್ತರಿಗಾಗಲೀ ಆಗಲೂ ತಿಳಿಯಲಿಲ್ಲ. ಈಗಲೂ ತಿಳಿಯದು.




ಒಬ್ಬ ರಾಜ. ಆ ರಾಜನಿಗೆ ಇಬ್ಬರು ಹೆಂಡತಿಯರು. ದೊಡ್ಡವಳಿಗೆ ಒಬ್ಬ ಮಗಳಿದ್ದಳು. ಆ ಹುಡುಗಿ ಸುಂದರಿ. ಆಕೆಯ ಅಂದಚೆಂದಗಳನ್ನು ಕೇಳಿ, ಆಕೆಯನ್ನು ವಿವಾಹವಾಗಲು ಅನೇಕ ದೇಶಗಳಿಂದ ರಾಜಕುಮಾರರು ಬರುತ್ತಿದ್ದರು. ಅದನ್ನು ನೋಡಿ ಕಿರಿಯ ರಾಣಿಗೆ ಹೊಟ್ಟೆ ಕಿಚ್ಚು. ಯಾವುದೋ ಬಂದು ನೆಪಮಾಡಿ ಒಂದು ಸಂಬಧವೂ ಕುದುರದಂತೆ ಮಾಡುತ್ತಿದ್ದಳು. ಅದ್ದರಿಂದ ರಾಜಕುಮಾರಿಯ ಮದುವೆ ನಿಂತು ಹೋಯಿತು.

ಆ ಹುಡುಗಿಯನ್ನು ಮತ್ತೂ ಗೋಳಾಡಿಸುವ ದುರುದ್ದೇಶದಿಂದ ಕಿರಿಯ ರಾಣಿ ಒಂದು ಕೃತ್ರಿಮ ಆಲೋಚನೆ ಮಾಡಿದಳು. ರಾಜನಿಗೆ ನಂಬಿಕೆ ಹುಟ್ಟುವಂತೆ ಹೀಗೆಂದಳು." ನಮ್ಮ ಮಗುವಿಗೆ ಎಷ್ಟೋ ಸಂಬಂಧಗಳು ಬಂದು ಹೋಗುತ್ತಿವೆ. ಆದರೆ ಒಂದೂ ಸರಿಹೋಗಲಿಲ್ಲ. ಮದುವೆ ಮಾತ್ರ ದೂರವಾಗುತ್ತದೆ. ಆದುದರಿಂದ ಒಂದು ಉಪಾಯ ಮಾಡೋಣ. ಪಾತಾಳದಲ್ಲಿ ಒಂದು ಭವನ ಕಟ್ಟಿಸಿ, ನಮ್ಮ ತೋಟದಿಂದ ಆ ಭವನಕ್ಕೆ ಮೆಟ್ಟಿಲಿಡಿಸಬೇಕು. ತೋಟದಲ್ಲಿ ಜಳಕವಾಡುವ ಕೊಳವಿದೆ ನೋಡಿ, ಅದರಲ್ಲಿ ಮೆಟ್ಟಲು ಇಳಿಯುವ ಬಾಗಿಲನ್ನು ಜೋಡಿಸಬೇಕು. ಬಾಗಿಲು ನೀರಿನಲ್ಲಿ ಮುಳುಗಿರುವುದರಿಂದ ಹರಿಹರಾದಿಗಳೂ ಭವನವೆಲ್ಲಿರುವುದೆಂಬುದನ್ನು ಕಂಡುಕೊಳ್ಳಲಾರರು. ನಮ್ಮ ರಾಜಕುಮಾರಿಯನ್ನು ಆ ರಹಸ್ಯ ಭವನದಲ್ಲಿ ಗುಟ್ಟಾಗಿ ಇರಿಸಿ ಬರುವ ರಾಜಕುಮಾರರನ್ನು ಆಕೆಯ ಪತ್ತೆ ಹಚ್ಚುವಂತೆ ಕೇಳೋಣ. ಮೂರು ದಿನಗಳಲ್ಲಿ ಅವರು ಕಂಡುಹಿಡಿದರೆ ಸಮ. ಇಲ್ಲದಿದ್ದರೆ ಅವರ ತಲೆತೆಗೆದು ಬಾಗಿಲಿಗೆ ಕಟ್ಟೋಣ.

ರಾಜನು ಅವಳ ಮಾತಿಗೆ ಬೆಲೆ ಕೊಟ್ಟು "ಹಾಗೇ ಆಗಲೀ" ಎಂದನು. ಕಿರಿಯರಾಣಿ ಅವಸರವಸರವಾಗಿ ಏರ್ಪಾಟುಗಳೆಲ್ಲವನ್ನೂ ಪೂರ್ತಿ ಮಾಡಿಸಿದಳು. ಸೋತುಹೋದ ರಾಜಕುಮಾರರ ತಲೆ ಕತ್ತರಿಸಿ ನೇತುಹಾಕಲು ಪ್ರತ್ಯೇಕ ಭವನವನ್ನು ಕಟ್ಟಿಸಿದಳು. ಆ ಪ್ರಕಾರ ಡಂಗೂರ ಸಾರಿಸಿದಳು. ಆ

ಕುಮಾರಿ ಜಾನಕಿ

ವಿಷಯವನ್ನು ಕೇಳಿ ಅನೇಕ ರಾಜಕುಮಾರರು ಬಂದರು. ರಾಜಕುಮಾರಿ ಇರುವ ಸ್ಥಳವನ್ನು ಯಾರೂ ಕಂಡು ಹಿಡಿಯಲಿಲ್ಲ. ಅವರ ತಲೆಗಳನ್ನು ಕಡಿದು ಸಾಲಾಗಿ ಮಂದಿರದ ಬಾಗಿಲಿಗೆ ತೂಗು ಹಾಕಿಸಿದಳು.

* * *

ಆ ಊರಿಗೆ ಸಮೀಪದಲ್ಲೇ ಮತ್ತೊಬ್ಬ ರಾಜನಿದ್ದ. ಆತನಿಗೆ ಮೂರುಜನ ಮಕ್ಕಳು. ಒಂದುದಿನ ಅವರಲ್ಲಿ ಹಿರಿಯುವನು ತಂದೆಯ ಹತ್ತಿರ ಹೋಗಿ "ಅಪ್ಪಾ, ನಮ್ಮ ಪಕ್ಕದ ರಾಜನ ಮಗಳನ್ನು ರಹಸ್ಯ ಮಂದಿರದಲ್ಲಿಟ್ಟು ಅವಳನ್ನು ಕಂಡು ಹಿಡಿದವರಿಗೆ ಆಕೆಯನ್ನಿತ್ತು ವಿವಾಹಮಾಡುವೆವೆಂದು ಸಾರಿದ್ದಾರೆ. ಆಕೆಯನ್ನು ಪತ್ತೆ ಹಚ್ಚಿದರೆ ಪತ್ನಿಯು ಸಿಕ್ತಾಳೆ, ಪ್ರತಿಷ್ಠೆಯೂ ಬರುತ್ತದೆ. ಆದ್ದರಿಂದ ಹೋಗಿ ಬರಲು ಅನುಮತಿ ಕೊಡಿ" ಎಂದ. ಅದಕ್ಕೆ ತಂದೆ "ಮಗೂ, ಇದು ಬಹಳ ಪ್ರಮಾದಕರವಾದ ಪರೀಕ್ಷೆ. ಇದರಲ್ಲಿ ಗೆದ್ದು ಬರುವ ಸಂಭವಗಳೇ ಕಡಿಮೆ. ಪ್ರಾಣಕ್ಕೆ ಮೋಸ ಬಂದಮೇಲೆ ಪಾಣಿಗ್ರಹಣವೇನು ಬಂತು. ಇದುವರೆಗೆ ಎಷ್ಟೋ ಜನ ಸೋತುಹೋದದ್ದರಿಂದತಲೆ ತೆಗಿಸಿ ತೂಗಹಾಕಿದ್ದಾರೆ. ನೀನು ಹೋಗುವುದು ನನಗೆ ಸರ್ವಥಾ ಇಷ್ಟವಿಲ್ಲ" ಎಂದ.

ಪರಿಪರಿವಿಧದಲ್ಲಿ ಹೇಳಿದರೂ ರಾಜಕುಮಾರ ಕೇಳಲಿಲ್ಲ. 'ಏನಾದರಾಗಲೀ' ಎಂದು ಹೊರಟ. ಮೂರುದಿನ ಎಷ್ಟು ಹುಡುಕಿದರೂ



ರಾಜಕುಮಾರಿಯ ಸುಳಿವು ಆತನಿಗೆ ಸಿಕ್ಕದಾಯಿತು. ಗಡುವು ತೀರಿದ ಕೂಡಲೇ ಮಿಕ್ಕೆಲ್ಲ ರಾಜಕುಮಾರರ ತಲೆಯನ್ನು ತೆಗೆದಂತೆ ಆತನ ತಲೆಯನ್ನೂ ತೆಗಿಸಿ, ಬಾಗಿಲಿಗೆ ನೇತು ಹಾಕಿದರು.

ರಾಜಕುಮಾರನು ಎಷ್ಟು ದಿನಕ್ಕೂ ಮರಳಿಬಾರದಿದ್ದರಿಂದ ಸತ್ತು ಹೋಗಿರಬೇಕೆಂದು ಅವನ ತಂದೆ ತಾಯಿಗಳು ನಿಶ್ಚಯಿಸಿಕೊಂಡರು. ಎರಡನೇ ಮಗನು ತಾನೂ ಸ್ವಯಂವರಕ್ಕೆ ಹೋಗಿ ಬರುವೆನೆಂದ. ತಂದೆ ಬೇಡವೆಂದು ಎಷ್ಟು ಬಗೆಯಾಗಿ ಹೇಳಿದರೂ ಕೇಳದೆ ಪ್ರಯಾಣ ಮಾಡಿದ. ಈತನೂ ಸಹ ಪರೀಕ್ಷೆಯಲ್ಲಿ ಸೋತ. ಅಣ್ಣನಿಗಾದ ಗತಿಯೇ ಈತನಿಗೂ



ಆಯಿತು. ಕೆಲದಿನಗಳಾದಮೇಲೆ ಕಡೆಯ ಮಗನೂ ಹೊರಡಲು ಸಿದ್ಧನಾದ.

ಇಬ್ಬರು ಮಕ್ಕಳನ್ನು ಕಳೆದುಕೊಂಡ ತಂದೆ ತಾಯಿಗಳು ಬಹಳವಾಗಿ ಗೋಳಾಡಿದರು. ಹೋಗಬೇಡವೆಂದು ಅನೇಕರೀತಿ ಕೇಳಿಕೊಂಡರು. ಆತನು ಅವರ ಮಾತಿಗೆ ಕಿವಿ ಕೊಡಲಿಲ್ಲ.

ಕಡೆಯ ಹುಡುಗ ಬಹಳ ಬುದ್ಧಿವಂತ, ಯುಕ್ತಿಶಾಲಿ. ದಾರಿಯಲ್ಲಿ ಒಂದು ಪಟ್ಟಣವನ್ನು ಸೇರಿ ಅಲ್ಲಿ ಪ್ರಸಿದ್ಧಿ ಪಡೆದ ಒಬ್ಬ ಅಕ್ಕಸಾಲಿಗನ ಹತ್ತಿರ ಹೋದ. ಅವನಿಗೆ ಎರಡು ಚೀಲ ಬಂಗಾರವನ್ನು ಕೊಟ್ಟು, ತಾನು ಅದರಲ್ಲಿ ಹಿಡಿಸುವಷ್ಟು ದೊಡ್ಡ ಆಕೃತಿಯ ಒಂದು ಟಗರಿನ ವಿಗ್ರಹವನ್ನು ಮಾಡುವಂತೆ ಹೇಳಿದ.

ಮಾರನೆಯ ದಿನ ಬೆಳಗ್ಗೆ ಚಿನ್ನದ ಟಗರು ಸಿದ್ಧವಾಯಿತು. ಅದನ್ನು ನೋಡಿ ರಾಜಕುಮಾರ ಸಂತೋಷಪಟ್ಟ. "ಎಲೆ, ಸೋನಗಾರ, ವಿಗ್ರಹ ಬಹಳ ಸುಂದರವಾಗಿದೆ. ಇದನ್ನು ರಾಜನ ಹತ್ತಿರಕ್ಕೆ ತೆಗೆದುಕೊಂಡು ಹೋಗಿ 'ಇದು ರಾಜಕುಮಾರಿಗೆ ಕಾಣಿಕೆಯಾಗಿ ತಂದಿರುವೆನು' ಎಂದು ಹೇಳು." ಎಂದು ಅಕ್ಕಸಾಲಿಗನಿಗೆ ಹೇಳಿದ. ಯಾರೂ ಕಾಣಿಸದಿರುವಾಗ ತಾನು ಆ ವಿಗ್ರಹದಲ್ಲಿ ಅವಿತುಕೊಂಡ.

ಅದ್ಭುತವಾದ ಅಪೂರ್ವವಾದ ಆ ವಿಗ್ರಹವನ್ನು ನೋಡಿ ರಾಜ ತುಂಬಾ ಮೆಚ್ಚಿದ. ಅಕ್ಕಸಾಲಿಗನಿಗೆ ಹತ್ತು ಸಾವಿರ ವರಹಗಳನ್ನು ಬಹುಮಾನವಾಗಿ ಕೊಟ್ಟ. ರಾಜಾಜ್ಞೆಯಂತೆ ಆ ಟಗರನ್ನು ರಾಜಕುಮಾರಿಯ ರಹಸ್ಯ ಮಂದಿರಕ್ಕೆ ಕೊಂಡೊಯ್ದು ಒಂದು ಮೇಜಿನ ಮೇಲಿರಿಸಿದರು.

ಅಪರೂಪವಾದ ವಿಗ್ರಹವನ್ನು ನೋಡಿ ಆಕೆ ಬಹಳ ಸಂತೋಷಪಟ್ಟಳು. ರಾಜಕುಮಾರ ವಿಗ್ರಹಕ್ಕಿದ್ದ ಕಣ್ಣುಗಳ ಮುಖಾಂತರ ರಾಜಕುಮಾರಿಯ ಸೌಂದರ್ಯವನ್ನು ನೋಡಿ ಒಳಗೊಳಗೆ ಹಿಗ್ಗುತ್ತಿದ್ದ.

ರಾಜಕುಮಾರಿಗೆ ಪ್ರತಿದಿನ ತಿಂಡಿ ತೀರ್ಥಗಳನ್ನು ತಂದು ಮೇಜಿನ ಮೇಲೆ ಸಿದ್ಧಮಾಡಿಡುತ್ತಿದ್ದರು. ವಿಗ್ರಹದಲ್ಲಿ ಅವಿತುಕೊಂಡಿದ್ದ ರಾಜಕುಮಾರನಿಗೆ ಹಸಿವಿನ ಬಾಧೆ ತಡೆಯದಾಯಿತು. ಅರ್ಧರಾತ್ರಿಯಲ್ಲಿ

ಹೊರಗೆ ಬಂದು ರಾಜಕುಮಾರಿ ಬಿಟ್ಟಿದ್ದ ಮಿಕ್ಕ ಪದಾರ್ಥಗಳನ್ನು ತಿಂದು ಯಥಾ ಪ್ರಕಾರ ವಿಗ್ರಹದೊಳಗೆ ಸೇರಿಕೊಳ್ಳುತ್ತಿದ್ದ.

ರಾಜಕುಮಾರಿಗೆ ಈ ವಿಚಿತ್ರ ಅರ್ಥವಾಗ ಲಿಲ್ಲ. ಒಂದು ದಿನ ಇಡೀರಾತ್ರಿ ಎಚ್ಚರ ವಾಗಿದ್ದಳು. ಕಳ್ಳ ಸಿಕ್ಕಿಬಿದ್ದ.

ರಾಜಕುಮಾರನ ಅಂದಕ್ಕೆ ರಾಜಕುಮಾರಿ ಮಾರುಹೋದಳು. ಆತನನ್ನು ಹೊರತು ಮತ್ತೆ ಯಾರನ್ನೂ ಮದುವೆಯಾಗಕೂಡ ದೆಂದು ನಿಶ್ಚಯಿಸಿದಳು. ಈ ಕೋರಿಕೆ ಈಡೇರಬೇಕಾದರೆ ಹೇಗೆ?

ರಾಜಕುಮಾರ ಒಂದು ಉಪಾಯ ಹೂಡಿದ. ಆತನು ಹೇಳಿದ ಪ್ರಕಾರ ರಾಜ ಕುಮಾರಿ ಟಗರಿನ ಒಂದು ಕಾಲನ್ನು ಮುರಿದು, ಆ ವಿಗ್ರಹವನ್ನು ಸರಿಮಾಡಿಸಿ ಕಳುಹಿಸುವಂತೆ ತಂದೆಗೆ ತಿಳಿಸಿದಳು. ವಿಗ್ರಹವನ್ನು ತೆಗೆದುಕೊಂಡು ಹೋಗು ವಾಗ ರಾಜಕುಮಾರ ಅದರಲ್ಲಿ ಹೊಕ್ಕು ಹೊರಗೆ ಬಂದುಬಿಟ್ಟ.

ಈಗ ರಹಸ್ಯ ಮಂದಿರಕ್ಕೆ ದಾರಿ ತಿಳಿದು ಕೊಂಡ ರಾಜಕುಮಾರ. ರಾಜನ ದರ್ಶನ ಪಡೆದು "ನಿಮ್ಮ ಮಗಳನ್ನು ಮದುವೆ ಆಗಲು ಬಂದೆ" ಎಂದ. "ರಾಜಕುಮಾರ, ನಿನ್ನ ಅಣ್ಣಂದಿರಿಬ್ಬರೂ ಬೇಡವೆಂದರೂ ಕೇಳದೆ ನಿಷ್ಕಾರಣವಾಗಿ ಪ್ರಾಣ ಕಳೆದುಕೊಂಡರು. ಈ ಪರೀಕ್ಷೆ ಪ್ರಮಾದವಾದದ್ದು. ಬೇಡ ಮಗೂ" ಎಂದು ಬುದ್ಧಿ ಹೇಳಿದ ರಾಜ. ರಾಜಕುಮಾರ ಹಿಂತೆಗೆಯಲಿಲ್ಲ.



ಏನೂ ಅರಿಯದವನಂತೆ ಅಡ್ಡಾಡುತ್ತಾ ರಾಜಕುಮಾರ ತೋಟದೊಳಗೆ ಹೊಕ್ಕನು. ಕಿರಿಯ ರಾಣಿ ನೆರಳಿನಂತೆ ಆತನನ್ನು ಹಿಂ ಬಾಲಿಸಿದಳು. ರಾಜಕುಮಾರ ಕೊಳದ ಹತ್ತಿರ ಹೋದ. ಅದರಲ್ಲಿಯ ನೀರು ತೆಗೆದು ಬಿಡುವಂತೆ ಹೇಳಿದ. ರಾಣಿ ಆತನಿಗೆ ಅಡ್ಡಿ ಮಾಡ ಹೋದಳು. ಆದರೆ ಸಾಧ್ಯವಾಗಲಿಲ್ಲ. ನೀರನ್ನು ತೆಗೆಸಿದರು.

ಮಂದಿರದ ಬಾಗಿಲು ತೆಗೆಯುವಂತೆ ಹೇಳಿದ ರಾಜಕುಮಾರ. ರಾಣಿ ತೆಗೆಯಲೇ ಬೇಕಾಯಿತು. ಇಬ್ಬರೂ ಮೆಟ್ಟಲು ಇಳಿದು ಬಂದರು. ಇನ್ನೇನು ರಹಸ್ಯ ಮಂದಿರವನ್ನು ಪ್ರವೇಶಿಸುವಾಗ, "ರಾಜಕುಮಾರ, ನೀನು ಇಲ್ಲಿಯೇ ಇರು. ಕೆಲನಿಮಿಷಗಳಲ್ಲಿ ಬಂದು

ನಿನ್ನನ್ನು ಕರೆದುಕೊಂಡು ಹೋಗುವೆನು" ಎಂದು ಒಳಕ್ಕೆ ಹೋದಳು ರಾಣಿ.

ರಾಣಿ ಮತ್ತೊಂದು ಯುಕ್ತಿ ಹೂಡಿದಳು. ರಾಜಕುಮಾರಿ, ಮತ್ತು ಆಕೆಯ ಸಖಿಯರಿಗೂ ಎಳ್ಳಷ್ಟೂ ಭೇದವಿರದಂತೆ ಎಲ್ಲರಿಗೂ ಒಂದೇ ರೀತಿ ವಸ್ತ್ರಾಲಂಕಾರ ಮಾಡಿಸಿ, ಆಭರಣಗಳನ್ನು ತೊಡಿಸಿದಳು. ರಾಜಕುಮಾರನ ಹತ್ತಿರ ಬಂದು "ಇದರಲ್ಲಿ ರಾಜಕುಮಾರಿ ಯಾರೋ ಕಂಡು ಹಿಡಿದರೆ ಆಕೆಯನ್ನು ನಿನಗೆ ಕೊಟ್ಟು ವಿವಾಹಮಾಡುವೆವು. ಇಲ್ಲ ನಿನ್ನ ತಲೆ ಕಡಿಸಿ ಬಾಗಿಲಿಗೆ ತೂಗಹಾಕುವೆವು" ಎಂದು ಹೇಳಿದಳು.

ಈ ಮೊದಲೇ ಪರಿಚಯವಿದ್ದ ಕಾರಣ ರಾಜಕುಮಾರಿ ಯಾರೋ ಆತನಿಗೆ ಗೊತ್ತು. ಆದರೂ ಕಿರಿಯ ರಾಣಿಗೆ ಉತ್ತರ ಕೊಡಲು ಆಕೆಯ ಯುಕ್ತಿಗೆ ಒಂದು ಪ್ರತಿಯುಕ್ತಿ ಮಾಡಿದ. ತನ್ನ ಹತ್ತಿರವಿದ್ದ ಬಂಗಾರದ ನಾಣ್ಯಗಳನ್ನು ನೆಲದಮೇಲೆರಚಿದ. ಸಖಿಯರೆಲ್ಲರೂ ಅವುಗಳನ್ನು ಆರಿಸಲು ತೊಡಗಿದರು. ರಾಜಕುಮಾರಿ ಮಾತ್ರ ಅದಕ್ಕೆ ಆಶೆಪಡದೆ ಗಂಭೀರವಾಗಿ ನಿಂತಿದ್ದಳು. ರಾಜಕುಮಾರ ಆಕೆಯ ಕೈ ಹಿಡಿದುಕೊಂಡ.

ಇದೆಲ್ಲವನ್ನು ನೋಡುತ್ತಿದ್ದ ರಾಜನು, ರಾಜಕುಮಾರನಿಗೂ, ತನ್ನ ಮಗಳಿಗೂ ಹೂಮಾಲೆಗಳನ್ನು ಹಾಕಿ ಹರಸಿದನು. ರಾಜಕುಮಾರನ ತಂದೆ ತಾಯಿಗಳಾದ ತನ್ನ ಬೀಗರನ್ನು ಕರೆ ಕಳುಹಿಸಿ, ಅತಿವೈಭವದಿಂದ ಮಗಳ ವಿವಾಹ ಮಾಡಿದ.

ರಾಕ್ಷಸ ಬುದ್ಧಿಯ ಕಿರಿಯ ರಾಣಿ ಈ ವರೆವಿಗೂ ತೊಂಬತ್ತೊಂಬತ್ತು ತಲೆಗಳನ್ನು ಮಂದಿರದಲ್ಲಿ ತೂಗ ಹಾಕಿಸಿದ್ದಳು. ಈ ರಾಜಕುಮಾರನ ತಲೆಯನ್ನು ತೀರಿಸಿಕೊಳ್ಳೋಣವೆಂದಿದ್ದಳು.

ರಾಣಿಯ ನೀಚವರ್ತನೆಯನ್ನು ಗಮನಿಸುತ್ತಿದ್ದ ರಾಜ. ಆಕೆಯ ತಲೆಯನ್ನು ಕಡಿಸಿ ಬಾಗಿಲಿಗೆ ತೂಗ ಹಾಕಿ, ನೂರು ತಲೆಗಳ ಮಾಲೆಯನ್ನು ಪೂರ್ತಿಮಾಡಬೇಕೆಂದಿದ್ದ. ಆದರೆ ಅದಕ್ಕೆ ರಾಜಕುಮಾರ ಸಮ್ಮತಿಸಲಿಲ್ಲ. ಆಕೆಯನ್ನು ಕಾಪಾಡುವಂತೆ ಕೇಳಿ ಅವಳ ಬುದ್ಧಿ ಮಾರ್ಪಡಿಸಿದ.






ಒಂದು ದಿನ ಬ್ರಹ್ಮದೇವನು ಮುದುಕನ ರೂಪದಲ್ಲಿ ಗಂಗಾ ನದಿಯ ತೀರದಲ್ಲಿ ಕುಳಿತಿದ್ದನು. ತೀರದಲ್ಲಿ ಬೆಳೆದಿದ್ದ ದರ್ಭೆಯ ಹುಲ್ಲನ್ನು ಕಿತ್ತು ಗಂಟುಹಾಕುತ್ತಿದ್ದನು. ಆ ದಾರಿಯಲ್ಲೇ ಒಬ್ಬ ೧೬ – ೧೭ ವಯಸ್ಸಿನ ಬ್ರಾಹ್ಮಣ ಯುವಕನು ಹೋಗುತ್ತಿದ್ದನು. ಅವನು ಮುದುಕನನ್ನು ನೋಡಿ "ಇದೇನು, ತಾತ; ನೀವು ಮಾಡುತ್ತಿರುವ ಕೆಲಸ ವಿಚಿತ್ರವಾಗಿದೆ. ಆ ಹುಲ್ಲಿನ ಎಳೆಗಳಿಗೆ ಯಾಕೆಹಾಗೆ ಗಂಟುಹಾಕುತ್ತಿರುವಿರಿ?" ಎಂದುಕೇಳಿದನು.

ಅದಕ್ಕೆ ಮುದುಕನು "ಮಗೂ, ಇವು ಸಾಮಾನ್ಯ ಗಂಟುಗಳಲ್ಲ. ಬ್ರಹ್ಮಗಂಟು! ಕಾಶಿಯಲ್ಲಿರುವ ಹುಡುಗಿಗೆ ರಾಮೇಶ್ವರದಲ್ಲಿರುವ ಹುಡುಗನಿಗೂ, ಗಯೆಯಲ್ಲಿರುವ ಹುಡುಗಿಗೆ ದ್ವಾರಕೆಯಲ್ಲಿರುವ ಹುಡುಗನಿಗೂ ಹೀಗೇ ಯಾವ ಹುಡುಗಿಗೆ ಯಾವ ಹುಡುಗನು ಕೂಡುವ ಯೋಗವಿದೆಯೋ ನೋಡಿ ಈ ದರ್ಭೆಗಳಿಂದ ಬ್ರಹ್ಮಗಂಟು ಹಾಕುತ್ತಿರುವೆನು" ಎಂದು ತನ್ನ ಕೆಲಸ ತಾನು ಮಾಡುತ್ತಲೇ ಹೇಳಿದನು.

ಇದೆಲ್ಲಾ ಹುಡುಗನಿಗೆ ಹುಡುಗಾಟವಾಗಿ ತೋರಿತು. "ಏನಯ್ಯಾ, ಎಲ್ಲೋ ಕಾಶಿಯಲ್ಲಿರುವ ಹುಡುಗಿಗೂ, ರಾಮೇಶ್ವರದಲ್ಲಿರುವ ಹುಡುಗನಿಗೂ ಸೇರಿಸಿ ನಿನ್ನ ಇಷ್ಟಬಂದಂತೆ ಗಂಟುಹಾಕುತ್ತಿದ್ದೀಯಲ್ಲಾ! ಅದೇ ಪ್ರಕಾರ ನಡೆಯುವುದೆಂದು ನಂಬಬೇಕೇನು? ಹಾಗಾದರೆ ನನ್ನನ್ನು ಮದುವೆ ಆಗುವ ಹುಡುಗಿಯು ಎಲ್ಲಿದ್ದಾಳೆ ಹೇಳು, ನೋಡೋಣ" ಎಂದು ಕೇಳಿದನು.

ಮುದುಕ ಮೆಲುನಗೆ ನಕ್ಕು "ಇದೆಲ್ಲಾ ಸುಳ್ಳಲ್ಲವೋ ಹುಚ್ಚಾ! ಬ್ರಹ್ಮಲಿಪಿ ಎಂದರೆ ಏನೆಂದು ತಿಳಿದಿರುವೆ? ನಾನು ಹಾಕಿದ ಈ ಗಂಟುಗಳು ತಪ್ಪಿಹೋದಲ್ಲಿ ಪ್ರಪಂಚವೇ ತಲೆಕೆಳಗಾಗುವುದು. ಆದ್ದರಿಂದ ನೀನು ಯಾವ ಸಂಶಯವನ್ನೂ ಇಟ್ಟುಕೊಳ್ಳಬೇಡ" ಎಂದು ಹೇಳಿ, ತಾನು ಹಾಕಿದ ಗಂಟುಗಳಿಂದ ಎರಡು ಎಸಳು ಹುಡಿಕಿ ತೆಗೆದು "ಮಗೂ, ಹರಿದ್ವಾರಕ್ಕೆ ಸಮೀಪದಲ್ಲಿ ಒಂದು ಹೊಲಗೇರಿಯಲ್ಲಿ ಶ್ವಪಚನೆಂಬ ಚಂಡಾಲನೊಬ್ಬನು ವಾಸಮಾಡುತ್ತಿದ್ದಾನೆ. ಅವನ ಮಗಳು

ಚಂದ್ರಶೇಖರ, ಮೈಸೂರು.



ನಿನ್ನ ಹೆಂಡತಿಯಾಗುತ್ತಾಳೆ. ಇದು ಆಕೆಯ ಪೂರ್ವ ಜನ್ಮದ ಪುಣ್ಯ." ಎಂದು ಹೇಳಿ ತನ್ನ ಕೆಲಸದಲ್ಲಿ ನಿರತನಾದನು.

ಈ ಮಾತು ಕೇಳಿ ಯುವಕನಿಗೆ ಸಿಟ್ಟಿನಿಂದ ಮೈಯೆಲ್ಲಾ ಉರಿಯಿತು. ಕೋಪವನ್ನು ತಡೆಯಲಾರದೆ ಮುದುಕನನ್ನು ಅಲ್ಲಗಳೆದನು- "ಏನೋ ಬ್ರಹ್ಮಗಂಟಂತೆ, ಹೊಲೆಯರ ಹುಡುಗಿಯೊಡನೆ ಮದುವೆಯಂತೆ; ನಿನ್ನ ಬ್ರಹ್ಮಗಂಟು, ನಿನ್ನ ತಲೆಹರಟೆ ಎಲ್ಲಾ ನೋಡುತ್ತೇನೆ ಬಿಡು. ಹೊಲೆಯರ ಹುಡುಗಿ ನನ್ನ ಹೆಂಡತಿಯಾಗುವಳೆಂದು ಹೇಳುತ್ತಾನೆ.. ಮಹಾ ತಿಳಿದವನಂತೆ. ಏನಾದರೂ ಸರಿ, ನಾನು ಬ್ರಾಹ್ಮಣ ಹುಡುಗಿಯನ್ನು ಮದುವೆ ಮಾಡಿಕೊಳ್ಳದಿದ್ದರೆ ನನ್ನ ಹೆಸರು 'ಶರ್ಮ' ಅಲ್ಲವೇ ಅಲ್ಲ" ಎಂದು ರೇಗುತ್ತಾ ಹೊರಟುಹೋದನು. ಆ ಯುವಕನ ಅಡಾವಿಡಿಗೆ ಅವಿವೇಕಕ್ಕೆ ಮುದುಕ ನಸುನಕ್ಕನು.

ಇತ್ತ ಶರ್ಮ ಮನೆಗೆ ಹೋದ. ಅವನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಮುದುಕನ ಮಾತಿನಲ್ಲಿ ತನಗೆ ನಂಬಿಕೆಯಿಲ್ಲವೆಂದು ಹೇಳಿದರೂ, ತನ್ನ ಮದುವೆಯ ವಿಷಯ ಏನಾಗುವುದೋ ಎಂಬ ಭಯ ಅವನಿಗೆ.

ಆದ್ದರಿಂದ ಅವನು ಬಹಳ ಕಷ್ಟಪಟ್ಟು ಯಾರಿಗೂ ತಿಳಿಯದಂತೆ ಹರಿದ್ವಾರಕ್ಕೆ ಹೋದನು. ಆ ಊರಲ್ಲಿ ವಿಚಾರ ಮಾಡುವಲ್ಲಿ ಮುದುಕ ಹೇಳಿದ್ದಂತೆಯೇ ಹೊಲಗೇರಿಯಲ್ಲಿ ಶ್ವಪಚನೆಂಬುವನೊಬ್ಬನು ಇರುವಂತೆಯೂ, ಅವನಿಗೊಂದು ಹೆಣ್ಣು ಮಗುವಿರುವಂತೆಯೂ ತಿಳಿಯಬಂತು.

ಇದರಿಂದ ಶರ್ಮನಿಗೆ ಭಯ ಮತ್ತಷ್ಟು ಹೆಚ್ಚಿ ದಿಕ್ಕೇ ತೋಚದಾಯಿತು. 'ಹೀಗೇ ಇದ್ದರೆ ಆಗದು. ಆ ಮಗುವನ್ನು ಕೊಲ್ಲಿಸಿ, ಗಂಗೆಯಲ್ಲಿ ಒಗೆದರೆ ಪೀಡೆ ತೊಲಗುವುದು. ಮುದುಕನ ಮಾತು ತಪ್ಪಾಗುವುದು' ಎಂದು ಯೋಚಿಸಿ, ಆ ಊರಿನಲ್ಲಿದ್ದ ಕಟುಕನೊಬ್ಬನನ್ನು ಗುಟ್ಟಾಗಿ ಕರೆಸಿದನು. ಶ್ವಪಚನ ಮಗಳನ್ನು ಕೊಂದುಹಾಕಿದರೆ ಬಹುಮಾನ ಕೊಡುವೆನೆಂದು ಅವನನ್ನು ಪುಸಲಾಯಿಸಿದನು.

ಇಂತಹ ಗಿರಾಕಿ ಸಿಕ್ಕಿದ್ದಕ್ಕೆ ಅವನಿಗೆ ಆನಂದವಾಯಿತು. ತನಗೆ ಒಳ್ಳೆ ಬಹುಮಾನ ಸಿಕ್ಕುವುದೆಂದು ಸಂತೋಷದ ಸಂಗತಿ. ಆದರೆ ಹಣಕ್ಕೆ ಆಶೆಪಟ್ಟು ತವಃ್ಮರಿನ ಒಂದು ಮಗುವನ್ನು ಕೊಲೆ ಮಾಡುವುದೆಂದರೆ ಬಾಯಿ ಮಾತೆ? ಇದೊಂದು ಅವನಿಗೆ ಬಿಡಿಸಲಾಗದ ಸಮಸ್ಯೆಯಾಯಿತು.

ಅವನು ಬಹಳ ಯೋಚನೆ ಮಾಡಿದ. ತನಗೆ ತೊಂದರೆಯಾಗದಂತಹ ಒಂದು ಉಪಾಯ ಅವನಿಗೆ ಹೊಳೆಯಿತು. ಆ ಮಗು ಹಿಡಿಸುವಷ್ಟು ದೊಡ್ಡ ಬಿದಿರು ಬುಟ್ಟಿಯೊಂದನ್ನು ಮಾಡಿಸಿದನು. ಒಂದು ರಾತ್ರಿ ಎಲ್ಲರೂ ಮಲಗಿರುವ ಸಮಯದಲ್ಲಿ ತನ್ನ ಚಾಕಚಕ್ಯತೆಯಿಂದ ಶ್ವಪಚನ ಮನೆಗೆ ಹೋಗಿ ಮಗುವನ್ನು ಹೊರಗೆ ತಂದನು. ಅದನ್ನು ಆ ಬುಟ್ಟಿಯಲ್ಲಿಟ್ಟು ಶರ್ಮನನ್ನು ನಂಬಿಸಲು ಅವನಿಗೆ ಅದನ್ನು ತೋರಿಸಿದನು. ಆ ಬುಟ್ಟಿಯಲ್ಲಿ ಮಲಗಿರುವ ಮಗುವನ್ನು ನೋಡಿ ಶರ್ಮನಿಗೆ ಬಹಳ ಆನಂದವಾಯಿತು. ಕಟುಕರವನ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡನು.

"ಸರಿ, ನೀನು ಇದುವರೆಗೂ ಮಾಡಿದ ಕೆಲಸ ಸೊಗಸಾಗಿದೆ. ಇನ್ನು ಮುಂದಿನ ಕೆಲಸ ಬಹಳ ಕಷ್ಟವಾದುದು. ಮಗುವಿನ ಸಮೇತ ಈ ಬುಟ್ಟಿಯನ್ನು ಹರಿಹರಾದಿಗಳೂ ತಿಳಿಯದಂತೆ ನದಿಯಲ್ಲಿ ಬಿಟ್ಟುಬರಬೇಕು. ಇಗೋ ನಿನಗಾಗಿ ಬಹುಮಾನ ಕಾದು ಕುಳಿ



ತಿದೆ" ಎಂದು ಶರ್ಮ ಅವನನ್ನು ಪ್ರೋತ್ಸಾಹಿಸಿದನು.

ಅವನು ಆನಂದದಿಂದ ಕುಣಿಯುತ್ತಾ ಹೋಗಿ ಬುಟ್ಟಿಯನ್ನು ಗಂಗಾ ನದಿಯಲ್ಲಿ ಬಿಟ್ಟು ಶರ್ಮನಿಂದ ಬಹುಮಾನವನ್ನು ಪಡೆದು ಹೊರಟುಹೋದನು.

ಇದರಿಂದ ಶರ್ಮನಿಗೆ ಹೃದಯಭಾರ ಕಡಿಮೆಯಾದಂತಾಯಿತು. ಸಂತೋಷದಿಂದ ಮನೆಯನ್ನು ಸೇರಿ ಅಂದಿನಿಂದ ನಿಶ್ಚಿಂತೆಯಾಗಿದ್ದನು.

ಶರ್ಮನನ್ನು ಸಂಸಾರಿಯನ್ನಾಗಿ ಮಾಡಬೇಕೆಂದು ಅವನ ತಂದೆತಾಯಿಗಳು ಸಂಬಂಧಗಳಿಗಾಗಿ ಹುಡುಕಲು ಪ್ರಾರಂಭಿಸಿದರು. ಅದರಲ್ಲಿ ಒಂದು ಸಂಬಂಧವು ಕುದುರಿತು.



ಆದರೆ ಇನ್ನೇನು ಮುಹೂರ್ತವನ್ನು ನಿಶ್ಚಯಿಸಬೇಕೆನ್ನುವಷ್ಟರಲ್ಲಿ ಆ ಹುಡುಗಿಯ ತಾಯಿಗೆ ಪ್ರಾಣಾಪಾಯ ಒದಗಿತು. ಅಷ್ಟಕ್ಕೆ ಆ ಸಂಬಂಧ ನಿಂತುಹೋಯಿತು. ಆಮೇಲೆ ಇನ್ನೊಬ್ಬರು ಹೆಣ್ಣು ಕೊಡುತ್ತೇವೆಂದು ಬಂದರು. ಎಲ್ಲವನ್ನೂ ಸಿದ್ಧಪಡಿಸಿಕೊಂಡು ಹುಡುಗಿಯ ತಂದೆ ತನ್ನ ಮನೆ ಸೇರಿದ ಕೂಡಲೇ ಹಠಾತ್ತನೆ ಜ್ವರ ಬಂದು ಸತ್ತುಹೋದನು. ಇದರಿಂದ ಆ ಸಂಬಂಧವೂ ಕಡಿದುಹೋಯಿತು. ಸ್ವಲ್ಪ ದಿವಸ ಯಾರೂ ಹೆಣ್ಣು ಕೊಡಲು ಮುಂದೆ ಬರಲಿಲ್ಲ. ಕೊನೆಗೆ ಹಣ ಕೊಡುತ್ತೇವೆಂದು ಆಶೆ ತೋರಿಸಿ ಒಂದು ಬ್ರಾಹ್ಮಣ ಕುಟುಂಬದಲ್ಲೇ ಕನ್ಯೆಯನ್ನು ಮಾತನಾಡಿದರು. ಆದರೆ ಒಳ್ಳೆಯ ಮುಹೂರ್ತದ ಹೊತ್ತಿಗೆ ಆ ವಧುವಿಗೆ ಚೇಳು ಕಡಿದು ಹಸೆ ಮಣೆಯ ಮೇಲೇ ಮರಣ ಹೊಂದಿದಳು.

ಅಂದಿನಿಂದ ಶರ್ಮನಿಗೆ "ಸುಡುಗಾಡು ಶರ್ಮ" ಎಂಬ ಹೆಸರು ಬಂತು. ಎಷ್ಟು ಪ್ರಯತ್ನ ಮಾಡಿದರೂ ಒಂದು ಸಂಬಂಧ ಕೂಡ ಕೂಡಿಬರಲಿಲ್ಲ. "ಅಯ್ಯೋ ನಮ್ಮ ಹುಡುಗನಿಗೆ ಮದುವೆಯ ಯೋಗವೇ ಇಲ್ಲವೇನೋ" ಎಂದು ಹಿರಿಯರು ದುಃಖಪಟ್ಟರು. ಇದೆಲ್ಲವನ್ನೂ ನೋಡಿ ಶರ್ಮನಿಗೆ ಜೀವನದಲ್ಲಿ ಜುಗುಪ್ಸೆ ಜನಿಸಿತು.

ಹೀಗಿರುವಾಗ ಶರ್ಮ ತಂದೆ ತಾಯಿಗಳ ಅಪ್ಪಣೆ ಪಡೆದು ದೇಶಾಂತರ ಹೊರಟನು. ಹಾಗೆ ಯಾತ್ರೆಯಲ್ಲಿ ಮಧ್ಯೆ ತಾನಾಗಿ ಯಾವ ಹೆಣ್ಣಾದರೂ ಸಿಗಬಹುದು. ಮತ್ತು ಅನುಭವ ಸಿಗುವುದು. ಹೆಚ್ಚು ವಿಷಯ ತಿಳಿಯಬಹುದು ಎಂಬುದೇ ಅವನ ಆಸೆ. ಸ್ವಲ್ಪ ದಿನಗಳ ನಂತರ ಕಾಶೀ ಪಟ್ಟಣವನ್ನು ಸೇರಿದನು.

ಶರ್ಮ ಕಾಶಿಯನ್ನು ತಲುಪಿದ ದಿನ ಅಲ್ಲಿ ದೊಡ್ಡ ಮಳೆ ಸುರಿದು, ರಾತ್ರಿ ಕಣ್ಣು ಕಾಣದಂತೆ ಕತ್ತಲು ಕವಿಯಿತು. ಶರ್ಮನ ಬಟ್ಟೆಬರೆಯೆಲ್ಲಾ ಒದ್ದೆಯಾಗಿ ಛಳಿಯಲ್ಲಿ ನಡಗುತ್ತ ಒಂದು ಮನೆಯ ಜಗುಲಿಯನ್ನು ಸೇರಿ ನಿಂತನು.

ಇಷ್ಟರಲ್ಲಿ ಆ ಮನೆಯ ಯಜಮಾನನು ಊಟ ಮುಗಿಸಿ ಹೊರಕ್ಕೆ ಬಂದನು.

ಶರ್ಮನನ್ನು ಕಂಡಕೂಡಲೇ ಅವನು ಯಾರು, ಎಲ್ಲಿಯವನು ಎಂದು ಕೇಳಿ ತಿಳಿದುಕೊಂಡು ಮನೆಯೊಳಕ್ಕೆ ಕರೆದುಕೊಂಡು ಹೋದನು. ಅವನಿಗೆ ಊಟಕ್ಕೆ ಏರ್ಪಾಟು ಮಾಡಿ ಮರ್ಯಾದೆ ಮಾಡಿದನು.

ಆ ಮನೆಯ ಯಜಮಾನನಿಗೆ ಒಬ್ಬ ಮಗಳಿದ್ದಳು.

ಯುಕ್ತ ವಯಸ್ಸಿಗೆ ಬಂದ ಹುಡುಗಿಯಾದುದರಿಂದ ಆತನು ಅವಳಿಗೆ ಮದುವೆ ಮಾಡುವ ಯೋಚನೆಯಲ್ಲಿದ್ದನು. ಶರ್ಮನನ್ನು ನೋಡಿದೊಡನೆ "ಹುಡುಗ ಒಳ್ಳೆಯವನು. ಯೋಗ್ಯ. ಎಲ್ಲ ವಿಷಯಗಳಲ್ಲಿಯೂ ನಮಗೆ ತಕ್ಕ ಸಂಬಂಧ. ದೇವರೇ ಈ ಅವಕಾಶವನ್ನು ಒದಗಿಸಿದ್ದಾನೆ" ಎಂದುಕೊಂಡನಾತ.

ಆ ಮಾತು, ಈ ಮಾತು ಆಡುತ್ತಾ ಹುಡುಗನ ವಂಶ, ಆಸ್ತಿಪಾಸ್ತಿಗಳ ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡನು. ಆತನು ಎಣಿಸಿದಂತೆಯೇ ಎಲ್ಲವೂ ಅನುಕೂಲವಾಗಿ ತೋರಿತು. ತನ್ನ ಉದ್ದೇಶವನ್ನು ಶರ್ಮನಿಗೆ ತಿಳಿಸಿ ಅವನ ಅಭಿಪ್ರಾಯವೇನೆಂದು ಕೇಳಿದನು.

ಹೇಗಾದರೂ ಮದುವೆಯಾದರೆ ಸಾಕು ಎಂದು ಕಾದು ಕುಳಿತಿದ್ದ ಶರ್ಮ ಕೂಡಲೇ ತನ್ನ ಸಮ್ಮತಿ ಸೂಚಿಸಿದನು. ಜಾಗ್ರತೆಯಾಗಿ ಮುಹೂರ್ತವನ್ನು ಇಡಿಸಿದ್ದಾಯಿತು. ಶರ್ಮನಿಗೂ ಆ ಅವಧಾನಿಗಳ ಮಗಳು ಅನ್ನಪೂರ್ಣೆಗೂ ಶಾಸ್ತ್ರೋಕ್ತವಾಗಿ ಮದುವೆ ನಡೆಯಿತು.



* * * *

ವಿವಾಹವು ಪೂರ್ತಿಯಾಗಲು ನೂತನ ದಂಪತಿಗಳು ಹಿರಿಯರಿಗೆ ನಮಸ್ಕಾರ ಮಾಡಿದರು. ಅನಂತರ ಅವರು ದೇವರ ಮನೆಗೆ ಹೋದರು. ದೇವರ ಪೀಠದ ಸಮೀಪದಲ್ಲೇ ಒಂದು ಬಿದಿರು ಬುಟ್ಟಿ ನೇತಾಡುತ್ತಿತ್ತು. ಅದು ಕಣ್ಣಿಗೆ ಬಿದ್ದ ಕೂಡಲೇ ಶರ್ಮನಿಗೆ ಎದೆ ಒಡೆದಂತಾಯಿತು. ಅವನ ದೃಷ್ಟಿಯೆಲ್ಲಾ ಆ ಬುಟ್ಟಿಯ ಮೇಲೇ ಇತ್ತು. ಹೆಣ್ಣಿನ ಕಡೆ ಅವನ ಗಮನವೇ ಇರಲಿಲ್ಲ.

"ಆ ಬುಟ್ಟಿಯೇನು, ಮಾವನವರೇ?" ಎಂದು ಕಾತುರದಿಂದ ಕೇಳಿದ ಶರ್ಮ.






ಅದಕ್ಕೆ ಅವಧಾನಿಗಳು, "ಶರ್ಮಾ, ಆ ಬುಟ್ಟಿ ಸಾಮಾನ್ಯವಾದುದಲ್ಲ. ನಮಗೆ ಮಕ್ಕಳಾಗದೆ ಅನ್ನಪೂರ್ಣಾದೇವಿಗೆ ಹರಿಕೆ ಹೊತ್ತೆವು. ಒಂದು ದಿನ ದೇವಿಯು ನಿಮ್ಮ ಅತ್ತೆಗೆ ಕನಸಿನಲ್ಲಿ ಕಾಣಿಸಿಕೊಂಡು "ಇಷ್ಟರಲ್ಲೇ ನಿಮಗೊಂದು ಹೆಣ್ಣು ಮಗು ಲಭಿಸುವುದು. ಅದಕ್ಕೆ ನನ್ನ ಹೆಸರಿಟ್ಟು ಬೆಳೆಸು" ಎಂದು ಹೇಳಿ ಅಂತರ್ಧಾನಳಾದಳು. ಸ್ವಲ್ಪ ದಿನಗಳ ತರುವಾಯ ನಾನು ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದಾಗ ಈ ಬುಟ್ಟಿ ನನ್ನ ಕಡೆ ಹೊಡೆದುಕೊಂಡು ಬಂದಿತು. ಮುಚ್ಚಳ ತೆಗೆದು ನೋಡಿದರೆ ಒಳಗೆ ಇನ್ನೂ ವರ್ಷ ತುಂಬದ ಮಗು ಮಲಗಿತ್ತು. ಇದೆಲ್ಲವೂ ಆ ದೇವಿಯ ಅನುಗ್ರಹವೇ ಎಂದುಕೊಂಡು ವರಪ್ರಸಾದವಾಗಿ ಸಿಕ್ಕಿದ ಆ ಮಗುವಿಗೆ ದೇವಿಯ ಹೆಸರೇ ಇಟ್ಟು ಬಹಳ ಅಕ್ಕರೆಯಿಂದ ಮುದ್ದಾಗಿ ಬೆಳೆಸಿದೆವು. ಆ ದೇವಿಯ ದಯೆಯಿಂದಲೇ ನೀನೂ ಅಪ್ರಯತ್ನವಾಗಿ ನಮ್ಮ ಮನೆಗೆ ಬಂದೆ. ನಮ್ಮ ಅನ್ನಪೂರ್ಣೆಯನ್ನು ನಿನಗೆ ಕೊಟ್ಟು ವಿವಾಹ ಮಾಡಿ ಧನ್ಯರಾದೆವು. ಆ ದಿನದಿಂದ ದೇವರ ಜೊತೆಯಲ್ಲಿ ಈ ಬುಟ್ಟಿಯನ್ನು ಪೂಜಿಸುವ ಪದ್ಧತಿಯನ್ನಿಟ್ಟುಕೊಂಡಿರುವೆವು" ಎಂದವರು ಹೇಳಿದರು.

ಈ ಸಮಾಚಾರವನ್ನು ಕೇಳುವ ಹೊತ್ತಿಗೆ ಶರ್ಮನ ಮನಸ್ಸು ವಿಕಲತೆ ಹೊಂದಿತು. ತಲೆ ತಿರುಗುತ್ತಾ ಇತ್ತು. ಈ ಅನ್ನಪೂರ್ಣೆ ಬೇರೆ ಯಾರೂ ಅಲ್ಲದೆ ಹರಿದ್ವಾರದ ಹೊಲಗೇರಿ ಶ್ವಪಚನ ಮಗಳೇ ಎಂದು ನಿರ್ಧಾರವಾದಂತಾಯಿತು. ಆದರೆ ಕಾರ್ಯ ಮಿಂಚಿ ಹೋಯಿತು. ಏನು ಮಾಡಬೇಕು?

ಶರ್ಮ ಮಾವನೊಡನೆ ಮತ್ತೆ ಮಾತನಾಡಲಿಲ್ಲ. ಹೆಂಡತಿಯನ್ನು ಕಣ್ಣೆತ್ತಿ ಸಹ ನೋಡಲಿಲ್ಲ. ಆ ರಾತ್ರಿಯೇ ಯಾರಿಗೂ ತಿಳಿಯದಂತೆ ಮನೆ ಬಿಟ್ಟು ತನ್ನ ಊರಿಗೆ ಹೋಗೋಣವೆಂದು ಹೊರಟನು. ಬೆಳಗಾಗುವುದರೊಳಗೆ ದಾರಿಯಲ್ಲಿದ್ದ ಒಂದು ಛತ್ರವನ್ನು ಸೇರಿದನು. ಮನಸ್ಸಿನ ವ್ಯಥೆಯಿಂದ ಅವನಿಗೆ ತೀವ್ರವಾದ ಜ್ವರ ಬಂತು. ಜ್ಞಾನವೂ ತಪ್ಪಿತು. ಹೇಳುವವರು ಕೇಳು

ವವರು ಯಾರೂ ಗತಿಯಿಲ್ಲದೆ, ಪಾಪ, ಶರ್ಮ ಜ್ವರದಿಂದ ನರಳುತ್ತಿದ್ದನು.

* * * *

ಬುದ್ಧಿವಂತಳಾದ ಅನ್ನಪೂರ್ಣೆ ತನ್ನ ಪತಿಯ ಮನೋಗತವನ್ನು ಮೊದಲೇ ಊಹಿಸಿದ್ದಳು. ಅವನಲ್ಲಿ ಉಂಟಾದ ಬದಲಾವಣೆ, ವೈರಾಗ್ಯಭಾವವನ್ನು ಕಂಡುಕೊಂಡಳು. ಅವನಿಗೆ ಮನಸದಲ್ಲಿ ಯಾವುದೋ ಚಿಂತೆಯುಂಟಾದುದೇ ಈ ವಿರಕ್ತಿಗೆ ಕಾರಣವೆಂದು ಯೋಚಿಸಿ ಹೇಗಾದರೂ ಈ ಚಿಂತೆಯನ್ನು ದೂರ ಮಾಡಿಸಬೇಕೆಂದು ನಿಶ್ಚಯಿಸಿಕೊಂಡಳು. ಪತಿಯೇ ಸರ್ವಸ್ವವಲ್ಲವೇ!

ಆ ರಾತ್ರಿ ಅವಳೂ ಸಹ ನಿದ್ದೆ ಮಾಡಲಿಲ್ಲ. ತನ್ನ ಪತಿಯು ಮನೆಯಿಂದ ಹೊರಬಿದ್ದ ಕೂಡಲೇ ಅವನಿಗೆ ತಿಳಿಯದಂತೆ ತಾನೂ ಹಿಂಬಾಲಿಸಿದಳು. ಅವನ ಹಿಂದೆಯೇ ಛತ್ರವನ್ನು ಸೇರಿಕೊಂಡಳು.

ಛತ್ರದಲ್ಲಿ ಪ್ರಮಾದಾವಸ್ಥೆಯಲ್ಲಿದ್ದ ಶರ್ಮನಿಗೆ ಹಗಲೆನ್ನದೆ, ರಾತ್ರಿಯೆನ್ನದೆ ಎಲ್ಲಾ ಉಪಚಾರಗಳನ್ನೂ ಮಾಡಿದಳು. ಅವಳ ಕೈಯ ಉಪಚಾರದಿಂದ ಶೀಘ್ರವಾಗಿ ಅವನ ಜ್ವರ ತಗ್ಗಿತು. ತನಗೆ ಉಪಚಾರ ಮಾಡಿದ ಹುಡುಗಿ ತನ್ನ ಪತ್ನಿ ಅನ್ನಪೂರ್ಣೆ ಎಂಬ ಸಂಗತಿ ಶರ್ಮನಿಗೆ ತಿಳಿಯಲೇ ಇಲ್ಲ. ಏಕೆಂದರೆ ಮಾವನ ಮನೆಯಲ್ಲಿ ಆ ಬುಟ್ಟಿಯನ್ನು ಕಂಡಾಗಲಿಂದ ಅವನಿಗೆ ಬುದ್ಧಿ ಸ್ವಾಧೀನದಲ್ಲಿರಲಿಲ್ಲವೆಂದೇ ಹೇಳಬೇಕು.




ಅನ್ನಪೂರ್ಣೆ ಅವನಿಗೆ ಪಥ್ಯ ಪಾನಾದಿಗಳನ್ನು ಮಾಡಿಕೊಡಲು ಕೆಲವು ದಿನಗಳಲ್ಲೇ ಚೇತರಿಸಿಕೊಂಡನು. ಅವಳು ತನಗೆ ಮಾಡಿದ ಸೇವೆಯನ್ನು ನೆನೆದು ಅವನಿಗೆ ಆಶ್ಚರ್ಯವಾಯಿತು. ಅವಳು ತನಗೆ ಎಡೆಬಿಡದೆ ಉಪಚಾರ ಮಾಡುತ್ತಿದ್ದುದನ್ನು ಕಂಡು ಅವಳಲ್ಲಿ ಅನುರಾಗವುಂಟಾಯಿತು. ಇಂತಹ ಹುಡುಗಿಯನ್ನು ಮದುವೆಯಾಗುವುದು ತನ್ನ ಅದೃಷ್ಟವೆಂದು ಭಾವಿಸಿ, ತನ್ನ ಅಭೀಷ್ಟವನ್ನು ತಿಳಿಸಿದನು.

ಅವಳು ಸಂದೇಹಿಸುತ್ತಾ "ನಿಮಗಿನ್ನೂ ವಿವಾಹವಾಗಿಲ್ಲವೇ" ಎಂದು ಕೇಳಿದಳು. ಅದಕ್ಕೆ ಶರ್ಮ "ನನಗೆ ಈಗಾಗಲೇ ಮದುವೆಯಾಗಿರುವ ಮಾತು ನಿಜ. ಆದರೆ ವಿರಕ್ತ

ಭಾವದಿಂದ ಆ ಸಂಬಂಧವನ್ನು ತ್ಯಜಿಸಬೇಕಾಯಿತು. ಅನುರೂಪಳಾದ ಹುಡುಗಿಯನ್ನು ಹುಡುಕಿಕೊಂಡು ಹೊರಟಿರುವಾಗ ನನ್ನ ಮನಕ್ಕೊಪ್ಪುವಂತಹ ಹುಡುಗಿ ನೀನು ಸಿಕ್ಕಿದೆ" ಎಂದನು.

"ನಿಮಗೆ ಮತ್ತೆ ವಿರಕ್ತಿಭಾವ ಉಂಟಾಗುವುದೋ ಏನೋ? ಈ ಭಾಗ್ಯಕ್ಕೆ ಮದುವೆ ಮಾಡಿಕೊಳ್ಳುವುದೇಕೆ? ಮತ್ತೆ ಬಿಟ್ಟು ಹೋಗುವುದೇಕೆ?" ಎಂದು ಅನ್ನಪೂರ್ಣೆ ಪ್ರಶ್ನಿಸಿದಳು.

ಅದಕ್ಕೆ ಶರ್ಮನು ನಾನು "ನಿನ್ನನ್ನೆಂದಿಗೂ ತೊರೆಯುವುದಿಲ್ಲ. ಬೇಕಾದರೆ ಆಣೆ ಇಡುವೆನು. ಮನಸ್ಸು ಒಪ್ಪಿದ ಸಂಬಂಧ ಹೇಗೆ ತಾನೇ ಕಡಿದುಹೋಗುವುದು" ಎಂದು ಅವಳನ್ನು ನಂಬಿಸಿದನು.

ಮರುದಿನ ಆ ಊರಿನ ದೇವಾಲಯದಲ್ಲೇ ವಿವಾಹವೇರ್ಪಾಟಾಯಿತು. ಅವಳಿಗೆ ಮಾಂಗಲ್ಯ ಕಟ್ಟಲು ಹೋದ ಶರ್ಮನಿಗೆ ಅವಳ ಕತ್ತಿನಲ್ಲಿ ಆಗಲೇ ಇದ್ದ ಮಂಗಳಸೂತ್ರ ಕಾಣಿಸಿತು.

ಅವನಿಗೆ ಕೋಪಾಶ್ಚರ್ಯಗಳು ಒಟ್ಟಿಗೇ ಜನಿಸಿದುವು. ಅನ್ನಪೂರ್ಣೆ ಅವನ ಕೈಯನ್ನು ಹಿಡಿದುಕೊಂಡು ನಸುನಗೆ ಬೀರುತ್ತಾ "ನನಗೂ ಈಗಾಗಲೇ ಮದುವೆಯಾಗಿದೆ. ವೈರಾಗ್ಯದಿಂದ ಆ ಸಂಬಂಧವನ್ನು ಬಿಡಬೇಕಾಗಿಬಂತು. ಮನಸ್ಸಿಗೊಪ್ಪುವ ವರನನ್ನು ಹುಡುಕುತ್ತಾ ಹೊರಟೆ. ಈಗ ನಾನು ಮನಸ್ಸಿನಲ್ಲೆಂದುಕೊಂಡ ಲಕ್ಷಣಗಳೆಲ್ಲಾ ಕಂಡುಬಂತು........" ಎಂದು ಹೇಳುತ್ತಿದ್ದಂತೆಯೇ ಶರ್ಮನಿಗೆ ಅವಳಾರೆಂಬ ಗುರ್ತು ಹತ್ತಿತು. ನಡೆದುದೆಲ್ಲವೂ ಜ್ಞಾಪಕಕ್ಕೆ ಬಂದು ಅವನಿಗೆ ನಾಚಿಕೆಯುಂಟಾಯಿತು. ನಿಜವಾದ ವಿಷಯ ತಿಳಿದಮೇಲೆ ಅವನ ಮನಸ್ಸಿನ ಬಾಧೆ ಪರಿಹಾರವಾಯಿತು. ಅನ್ನಪೂರ್ಣೆ ನಿಜವಾಗಿಯೂ ವರಪ್ರಸಾದದಿಂದ ಸಿಕ್ಕಿದವಳೆಂದು ನಂಬಿ ಅವಳನ್ನು ಪ್ರೀತಿಸಿದನು. ಅಂದಿನಿಂದ ಆ ದಂಪತಿಗಳು ಯಾವ ಮನಸ್ತಾಪವೂ ಇಲ್ಲದೆ ಜಕ್ಕವಕ್ಕಿಗಳಂತೆ ಆನಂದದಿಂದ ಸಂಸಾರ ಸಾಗಿಸುತ್ತಿದ್ದರು.





ತಂಗಿಗೆ ತಗಲುವುದೆಂದರೇನು? ಹೀಗೆ ಆಗಲು ಕಾರಣ ದೆವ್ವವೇ, ಭೂತವೇ! ಇಲ್ಲ. ಮತ್ತೆ ಯಾವುದಾದರೂ ಶಕ್ತಿಯೇ? ಏನಾಗಿರಬಹುದು? ಕಾರಣ ತಿಳಿಯಲು ಎಷ್ಟೆಷ್ಟೋ ಯೋಚನೆ ಮಾಡಿದನು. ಎಷ್ಟು ಹೊತ್ತು ಯೋಚಿಸಿದರೂ ಬಗೆ ಹರಿಯಲಿಲ್ಲ. ಮನಸ್ಸಿಗೆ ನೆಮ್ಮದಿಯಿಲ್ಲದೆ ಕೊನೆಗೆ 'ಈ ಶಕ್ತಿ ನಾಶವಾಗಲಿ' ಎಂದು ಶಪಿಸಿದನು.

ವಾಕ್ಯದ್ಧಿಯ ಬಾಯಿಂದ ಮಾತು ಹೊರಟಿದ್ದೇ ತಡ, ಪ್ರಪಂಚದಲ್ಲಿ ನಿಜವಾಗಿಯೂ ಶಕ್ತಿ ನಾಶವಾಯಿತು.' ಅಷ್ಟರಲ್ಲಿ ಅವನ ತಂಗಿ ಸ್ವಲ್ಪ ಚೇತರಿಸಿಕೊಂಡಳು. ಅವಳನ್ನು ಸಂತೈಸಿ ಮತ್ತೆ ಕಲ್ಲು ತೆಗೆದು ಕೊಂಡು ಮಾವಿನ ಹಣ್ಣಿಗೆ ಗುರಿಯಿಟ್ಟು ಹೊಡೆದನು ಆ ಏಟಿಗೆ ಹಣ್ಣು ಕಿತ್ತು ಬಂತು. ಆದರೆ ನೆಲಕ್ಕೆ ಬೀಳಲೇ ಇಲ್ಲ. ಬರಿಯ ಹಣ್ಣೇ ಅಲ್ಲ. ಅವನೆಸೆದ ಕಲ್ಲು ಸಹ ನೆಲಕ್ಕೆ ಬೀಳಲಿಲ್ಲ. ಎರಡೂ ಆಕಾಶದಲ್ಲಿ ಗಾಳಿಯ ಪಟಗಳಂತೆ ಹಾರಿಹೋಗುತ್ತಿದ್ದವು.

ಈ ವಿಚಿತ್ರವನ್ನು ನೋಡಿ ವಾಕ್ಯದ್ಧಿಗೆ ಆಶ್ಚರ್ಯವಾಯಿತು. "ಸರಿ, ಎಷ್ಟು ದೂರ ಇವು ಹೀಗೇ ಹಾರಾಡುವವು. ಯಾವಾಗಲಾದರೂ ಕೆಳಕ್ಕೆ ಬೀಳಲೇ ಬೇಕು" ಎಂದು ಅವನು ಹಣ್ಣಿನ ಹಿಂದೆಯೇ ಓಡಿದ. ಮಾವಿನ ಹಣ್ಣು ಅವನ ಕೈಗೆ ನಿಲುಕದೆ ಇನ್ನೂ ಎತ್ತರವಾಗಿ ಹಾರಿಹೋಗುತ್ತಿತ್ತು. ವಾಕ್ಯದ್ಧಿ ಅದರ ಹಿಂದೆ ಒಂದೇ ಸಮನೆ ಓಡುತ್ತಿದ್ದನು.

'ಈಗ ಬರುತ್ತಾನೆ, ಆಗ ಬರುತ್ತಾನೆ' ಎಂದುಕೊಂಡು ಅವನ ತಂಗಿ ಮಾವಿನ ತೋಪಿನಲ್ಲೇ ಅವನಿಗಾಗಿ ಕಾಯುತ್ತಾ ಕುಳಿತಳು. ಎಷ್ಟು ಹೊತ್ತಾದರೂ ಅವಳ ಅಣ್ಣ ಹಿಂತಿರುಗಲಿಲ್ಲ. ಕೊನೆಗೆ ಅವಳು ಒಬ್ಬಳೇ ಮನೆಗೆ ಹೋದಳು.

ಮಾವಿನ ಕಾಯಿ, ಕಲ್ಲು ಎರಡೂ ಕೀಲು ಕುದುರೆಗಳಂತೆ ಮೇಲುಮೇಲಕ್ಕೆ ಹಾರುತ್ತಾ ಕೊನೆಗೆ ಮಾಯವಾಗಿ ಹೋದವು. ವಾಕ್ಯದ್ಧಿ ಅಷ್ಟು ಹೊತ್ತು ಅದರ ಹಿಂದೆ ಅಲೆದು ಸಾಕಾಗಿ ಬೇರೇನೂ ಮಾಡಲೂ ತಿಳಿಯದೆ ಹೊತ್ತು ಮುಳುಗುವ ವೇಳೆಗೆ ಮನೆ ಸೇರಿದನು.



# ವಾಕ್ಶುದ್ಧಿಯ ಕಥೆ

ಪೂರ್ವಕಾಲದಲ್ಲಿ ಒಂದು ಊರಿನಲ್ಲಿ ಒಬ್ಬ ಹುಡುಗನಿದ್ದನು. ಅವನಲ್ಲಿ ಒಂದು ಮಹಿಮೆಯಿತ್ತು. ಅವನ ಬಾಯಿಂದ ಯಾವ ಮಾತು ಹೊರಟರೂ ಅದು ತಪ್ಪದೆ ನಡೆದು ಹೋಗುತ್ತಲಿತ್ತು. ಇದರಿಂದಾಗಿ ಎಲ್ಲರೂ ಅವನನ್ನು 'ವಾಕ್ಶುದ್ಧಿ' ಎಂದು ಕರೆಯುತ್ತಿದ್ದರು.

ಒಂದುದಿನ ಅವನ ತಂಗಿ "ಅಣ್ಣಾ ತೋಟಕ್ಕೆ ಹೋಗಿ ಮಾವಿನ ಹಣ್ಣು ಕಿತ್ತುಕೊಂಡು ಬರೋಣ ಬಾ" ಎಂದು ಕರೆದುಕೊಂಡು ಹೋದಳು. ಮಾವಿನ ಗಿಡದ ತುಂಬಾ ಹಣ್ಣಿದ್ದರೂ ಕೈಗೆ ಒಂದೂ ಎಟಕುತ್ತಿರಲಿಲ್ಲ.

ಉದ್ದನೆಯ ಕೋಲಿಗಾಗಿ ಹುಡುಕಿದ ವಾಕ್ಶುದ್ಧಿ. ಅವನಿಗೆ ಕೋಲು ಸಿಗಲಿಲ್ಲ, ಕಲ್ಲು ಸಿಕ್ಕಿತು. "ಭೇಷ್, ಚೆನ್ನಾಗಿದೆ" ಎಂದುಕೊಂಡು ವಾಕ್ಶುದ್ಧಿ ಗುರಿ ನೋಡಿ ಆ ಕಲ್ಲನ್ನು ಹಣ್ಣಿನ ಕಡೆ ಬೀಸಿದನು. ಗುರಿ ತಪ್ಪಿತು. ಹಣ್ಣು ಬೀಳಲಿಲ್ಲ. ಮತ್ತೆ ಕಲ್ಲು ಎಸೆದನು.

ಹಣ್ಣು ಯಾವಾಗ ಬೀಳುವುದೋ, ಯಾವಾಗ ಅದನ್ನು ತಿನ್ನುವುದೋ ಎಂದು ಅವನ ತಂಗಿ ಬಾಯಿ ಚಪ್ಪರಿಸುತ್ತಿದ್ದಳು. ಅವಳು ಹಾಗೆ ಆತುರದಿಂದ ಕಾದು ನಿಂತಿದ್ದಾಗ ವಾಕ್ಶುದ್ಧಿ ಬೀಸಿದ ಕಲ್ಲು ಗುರಿ ತಪ್ಪಿ ಬಂದು ಅವಳ ಹಣೆಗೆ ಬಿತ್ತು. ಅವಳು ಒಡನೆಯೇ ನೆಲದ ಮೇಲೆ ಕುಸಿದು ಬಿದ್ದಳು. ಹಣೆಯಿಂದ ರಕ್ತ ಜಲ ಜಲನೆ ಹರಿಯಿತು. ವಾಕ್ಶುದ್ಧಿ ಏನಾಯಿತೋ ಎಂದು ಗಾಬರಿಯಾದನು. ತನ್ನ ಕೈವಸ್ತ್ರದಿಂದ ಒರೆಸಿ ಕಟ್ಟು ಕಟ್ಟಿದನು.

ಈ ವಿಪತ್ತು ಒದಗಿದುದಕ್ಕಾಗಿ ವಾಕ್ಶುದ್ಧಿಗೆ ಬಹಳ ವ್ಯಥೆ ಆಯಿತು. ಯಾರಾದರೂ ದುಷ್ಟರು ಕಲ್ಲು ಬೀರಿರಬಹುದೇನೋ ಎಂದು ನಾಲ್ಕು ಕಡೆಯೂ ನೋಡಿದನು. ಯಾರೂ ಕಾಣಿಸಲಿಲ್ಲ ಕಲ್ಲನ್ನು ಎತ್ತಿಕೊಂಡು ನೋಡಿದಮೇಲೆ ಅದು ತಾನು ಎಸೆದ ಕಲ್ಲೇ ಎಂದು ತಿಳಿಯಿತು.

ತಾನು ಹಣ್ಣಿಗೆ ಗುರಿ ಯಿಟ್ಟು ಎಸೆದ ಕಲ್ಲು ಎಲ್ಲೋ ದೂರದಲ್ಲಿ ನಿಂತಿದ್ದ ತನ್ನ

ಶ್ರೀಮತಿ ಉಷಾ

ಮಗನಿಗಾಗಿ ಅವನ ತಾಯಿ ಆತುರದಿಂದ ಎದುರು ನೋಡುತ್ತಿದ್ದಳು. ಅವನು ಕಣ್ಣಿಗೆ ಬಿದ್ದಕೂಡಲೇ" ಎಲ್ಲಿ ಹೋಗಿದ್ದೆಯೋ ಮಗು. ಇಷ್ಟು ದಣಿದಿದ್ದೀಯಲ್ಲ!!' ಎಂದು ಅವನ ವೈದಡವಿದಳು. ಬಳಲಿಕೆ ಕಡಿಮೆ ಮಾಡಲು ಸ್ನಾನಕ್ಕೆ ನೀರು ಕಾಯಿಸಿದಳು. ಚೆಂಬಿನಲ್ಲಿ ನೀರೆತ್ತಿ ಮಗನ ತಲೆಯ ಮೇಲೆ ಸುರಿದಳು. ಒಂದು ತೊಟ್ಟು ನೀರೂ ಅವನ ತಲೆಯಮೇಲೆ ಬೀಳಲಿಲ್ಲ. ಚೆಂಬನ್ನು ಅದ್ದಿದಷ್ಟೂ ಹಂಡೆಯಲ್ಲಿದ್ದ ನೀರು ಮಾತ್ರ ಕಡಿಮೆಯಾಗುತ್ತಿತ್ತೇ ಹೊರತು ಮಗನ ತಲೆಯ ಮೇಲೆ ನೀರು ಮಾತ್ರ ಬೀಳಲಿಲ್ಲ.



ಆಕೆಯು 'ಇದೇನು ವಿಚಿತ್ರ' ಎಂದುಕೊಂಡು ಕೈಯಲ್ಲಿ ಎರಡು ಬೊಗಸೆ ನೀರೆತ್ತಿ ಎಣ್ಣೆ ಸವರಿದಂತೆ ಸವರಿ "ಹೋಗಿ ಮೈ ಒರಸಿಕೋ" ಎಂದಳು. ವಾಕ್ಯದ್ಧಿಯು ಹಾಗೇ ಮಾಡಲು ಗೋಡೆಗೆ ನೇತು ಹಾಕಿದ್ದ ಟವಲನ್ನು ಎಟುಕಿಸಿಕೊಳ್ಳಲು ಕಾಲು ಮೇಲೆತ್ತಿದನು. ಕೂಡಲೇ ಹಾಗೆಯೇ ಗಾಳಿಯಲ್ಲಿ ತೇಲಿ ಹೋಗಿ ಮನೆಯಿಂದ ಹೊರಗೆ ಹಾರುತ್ತಾ ಬಂದನು.

ಈ ಅದ್ಭುತವನ್ನು ನೋಡಿ ಅವನ ತಂಗಿ ತನ್ನ ಗೆಳತಿಯರ ಬಳಿಗೆ ಓಡುತ್ತಾ ಹೋಗಿ "ಬನ್ನಿ ಬನ್ನಿ ನಮ್ಮಣ್ಣ ತಮಾಷೆ ಮಾಡುತ್ತಿದ್ದಾನೆ. ನೋಡಿ ಬನ್ನಿ" ಎಂದು ಕೂಗಿ ಕರೆದುಕೊಂಡು ಬಂದಳು. ಅವರೆಲ್ಲರೂ ಏಳುತ್ತಾ, ಬೀಳುತ್ತಾ ಓಡಿ ಬಂದರು. ಮಹಡಿ ಮೆಲಕ್ಕೆ ಹಾರಿ ಹೋದ ವಾಕ್ಯದ್ಧಿಯನ್ನು ನೋಡಿ ಅವರು ಆಶ್ಚರ್ಯದಿಂದ ಮೂಕರಾದರು. ಆಗ ವಾಕ್ಯದ್ಧಿಯ ತಂಗಿ "ಅಣ್ಣಯ್ಯ, ಹೇಗೂ ಮಹಡಿಯ ಮೇಲಕ್ಕೆ ಹತ್ತಿದ್ದೀಯಲ್ಲಾ, ಅಲ್ಲಿ ನನ್ನ ಚೆಂಡು ಬಿದ್ದಿದೆ. ಸ್ವಲ್ಪ ಎತ್ತಿ ಇತ್ತಲಾಗೆ ಹಾಕು" ಎಂದಳು. ಅವಳಿಗೋಸ್ಕರ ಚೆಂಡನ್ನು ಹುಡುಕಿ ತೆಗೆದು ಕೆಳಕ್ಕೆ ಹಾಕಿದಕೂಡಲೇ ಅದು ನೆಲಕ್ಕೆ ಬೀಳದೆ ಗುಳ್ಳೆಯಂತೆ ಆಕಾಶದಲ್ಲೇ ತೇಲುತಿತ್ತು. ಚೆಂಡನ್ನು ಪುನಃ ಹಿಡಿದು ಕೆಳಕ್ಕೆ ಜೋರಾಗಿ ಎಸೆದನು. ಅದು ಪುಟವಾಗಿ ಮತ್ತೆ ಮೇಲೆ ಹಾರಿ ಗಾಳಿಯಲ್ಲಿ ತೇಲಾಡ ತೊಡಗಿತು.

ವಾಕ್ಯದ್ಧಿ ಕೋಪದಿಂದ ಆ ಚೆಂಡನ್ನು ಜೋರಾಗಿ ಒದ್ದನು. ಒದೆದ ಜೋರಿಗೋ



ಏನೋ ಧೊಪ್ಪನೆ ಕೆಳಗೆ ಬಿದ್ದನು. ಇದನ್ನು ನೋಡಿ ಮನೆಯವರೆಲ್ಲರೂ ಗೊಳೋ ಎಂದು ಗೋಳಿಟ್ಟರು. ಕೂಡಲೆ ಡಾಕ್ಟರನನ್ನು ಕರೆಸಿದರು. ಡಾಕ್ಟರು ಇಂಜಕ್ಷನ್ ಕೊಡಲು ಹೋದರೆ ಪಿಚಕಾರಿಯಲ್ಲಿ ಔಷಧಿ ಏರಲೇ ಇಲ್ಲ. ಇನ್ನೊಂದನ್ನು ನೋಡಿದನು. ಅದರಲ್ಲೂ ಹತ್ತಲಿಲ್ಲ. ಎಷ್ಟು ಪಿಚಕಾರಿಗಳನ್ನು ತಂದು ಪ್ರಯತ್ನ ಮಾಡಿದರೂ ಔಷಧಿ ಮಾತ್ರ ಹತ್ತಲಿಲ್ಲ. ಇಂತಹ ಅಸಂದರ್ಭ ಡಾಕ್ಟರಿಗೆಂದೂ ಒದಗಿರಲಿಲ್ಲ. ಆತನಿಗೆ ಇದರಿಂದ ಆಶ್ಚರ್ಯವಾಯಿತು.

ತಮ್ಮ ಹುಡುಗ ಇನ್ನು ಬದುಕಲಾರನೆಂದು ಅವನ ತಂದೆ ತಾಯಿಗಳು ಗಾಭರಿಯಾದರು. ಆಗ ಅಲ್ಲಿ ನೆರದಿದ್ದವರಲ್ಲಿ ಕೆಲವರು ವಾಕ್ಶುದ್ಧಿಗೆ ದೃಷ್ಟಿ ತೆಗೆದರು. ಕೆಲವರು ಮಂತ್ರಿಸಿದ ಬೂದಿಯನ್ನು ಹಣೆಗಿಟ್ಟರು. ತಮತಮಗೆ ತಿಳಿದ ವೈದ್ಯವನ್ನು ಎಲ್ಲರೂ ಮಾಡಿದರು. ಒಬ್ಬ ಮಹಾತಾಯಿಯ ಕೈಗುಣದಿಂದಲೋ ಏನೋ ಸ್ವಲ್ಪ ಹೊತ್ತಿನಲ್ಲೇ ವಾಕ್ಶುದ್ಧಿ ಚೇತರಿಸಿಕೊಂಡು ಎದ್ದು ಕುಳಿತನು. ಅಲ್ಲಿ ನೆರೆದಿದ್ದವರೆಲ್ಲರೂ ಅವರವರ ಮನೆಗೆ ಹೋದರು. ಎಲ್ಲರೂ ಇದೇನೋ ಭೂತಚೇಷ್ಟೆ ಎಂದು ತಿಳಿದರು. ಮಂತ್ರಗಾರರಿಂದ ಪರಿಹಾರ ಮಾಡಿಸಿದರು. ಆದರೆ ಏನುಪಯೋಗ?

ಮರುದಿನದಿಂದ ವಾಕ್ಶುದ್ಧಿಯ ಸ್ನೇಹಿತರೂ ಅವನಂತೆಯೇ ಮೇಲಕ್ಕೆ ಹಾರಿ ಲಾಗ ಹಾಕತೊಡಗಿದರು. ಒಬ್ಬನು ಒಂದು ತಾಳೆ ಮರದ ಎತ್ತರಕ್ಕೆ ಹಾರಿದರೆ ಇನ್ನೊಬ್ಬ ನಾಲ್ಕು ತಾಳೆ ಮರದೆತ್ತರ ಎಗರಿದ. ಎಲ್ಲರೂ ಹಾರಿ ಹೋಗಿ ಮತ್ತೆ ಕೆಳಗಿಳಿದು ಬಂದರು. ಹೇಗೆ ಹಾರಲು ಸಾಧ್ಯವಾಯಿತೋ ಅವರಿಗೇ ತಿಳಿಯದು. ಒಬ್ಬ ಹುಡುಗನಂತೂ ಮೇಲಕ್ಕೆ ಹಾರಿ ಹಾಗೆಯೇ ಮಾಯವಾಗಿಬಿಟ್ಟನು! ಅವನೆಲ್ಲಿಗೆ ಹೋದನೋ ಯಾರಿಗೂ ತಿಳಿಯದು. ಅನೇಕರು ನೆಲಕ್ಕೆ ಕಾಲು ತಗುಲಿಸದೆ ನಡೆಯತೊಡಗಿದರು. ಒಬ್ಬನಂತೂ ನೀರಿನಮೇಲೆಯೇ ನಡೆದನು. ಇನ್ನೊಬ್ಬ ತಲೆ ಕೆಳಗಾಗಿ ನಡೆದನು. ಒಂದೇನು? ನೆನೆಸಿಕೊಂಡ ಹಾಗೆಲ್ಲಾ ಎಲ್ಲಿಗೆಂದರೆ ಅಲ್ಲಿಗೆ ಅವರೆಲ್ಲರೂ ಹಾರಿ ಹೋಗು

ತ್ತಿದ್ದರು. ಮಕ್ಕಳನ್ನು ನೋಡಿ ದೊಡ್ಡವರೂ ಆಕಾಶಪ್ರಯಾಣವನ್ನು ಪ್ರಾರಂಭಿಸಿದರು.

ಲಾಗ ಹಾಕುವುದು, ಗಾಳಿಯಲ್ಲಿ ಈಜು ವುದು ಮಾತ್ರವಲ್ಲ, ಗೋಪಾಲಕೃಷ್ಣನು ಗೋವರ್ಧನ ಪರ್ವತವನ್ನು ಹನುಮಂತನು ಸಂಜೀವಿನಿ ಪರ್ವತವನ್ನು ಎತ್ತಿದಂತೆ ಭಾರ ವಾದ ವಸ್ತುಗಳನ್ನೆಲ್ಲಾ ಲೀಲಾಜಾಲವಾಗಿ ಎತ್ತಿಡತೊಡಗಿದರು. ಇದರಿಂದ ಕೆಲವು ಉಪಯೋಗಕರವಾದ ಕೆಲಸಗಳು ಆದವು. ಗೂಟಗಳೇ ಇಲ್ಲದೆ ಬಟ್ಟೆಗಳು ಗೋಡೆಗಳಿಗೆ ನೇತಾಡುತ್ತಿದ್ದುವು. ಎತ್ತರದಲ್ಲಿರಬೇಕಾದ ಪಾತ್ರೆಗಳು ಯಾವ ಆಸರೆಯೂ ಇಲ್ಲದೆ ಕೆಳಗೆ ಬೀಳದಂತೆ ಇರುತ್ತಿದ್ದುವು.



ಆದರೆ ಇದು ಇಷ್ಟಕ್ಕೇ ನಿಲ್ಲದೆ ಕೆಲವು ಅನರ್ಥಗಳು ಒದಗಿ ಜನರು ಜೀವಿಸಿರುವುದೇ ಕಷ್ಟವಾಯಿತು. ಅವೇನೆನ್ನುವಿರಾ? ಬಾಯಾರಿಕೆಯಿಂದ ಒದ್ದಾಡುತ್ತಿರುವವರು ಒಂದು ಗುಟುಕು ನೀರು ಗಂಟಲಿಗೆ ಸುರಿದು ಕೊಳ್ಳೋಣವೆಂದರೆ ಪಾತ್ರೆಯಿಂದ ನೀರೇ ಬೀಳುತ್ತಿರಲಿಲ್ಲ. ಕುಡಿಯಲು ನೀರಿಲ್ಲದ ಮೇಲೆ ಹಲ್ಲುಜ್ಜುವಮಾತೇಕೆ? ದಿನದಿನಕ್ಕೂ ಬಿಸಿಲು ಹೆಚ್ಚಾಗಿ ಜನರಿಗೆ ಬವಳಿ ಬರು ತ್ತಿತ್ತು. ಎಷ್ಟುದಿನವಾದರೂ ತಂಪಾದಗಾಳಿ ಬೀಸದುದರಿಂದ ಮಳೆ ಬರುವ ಆಶೆಯೂ ಉಳಿಯಲಿಲ್ಲ. ಕ್ರಮವಾಗಿ ನೀರಿನ ಮೇಲಿನ ದೋಣಿಗಳೂ, ಭೂಮಿಯಮೇಲಿನ ಬಂಡಿ ಗಳೂ ಓಡಾಡುವುದೇ ಕಷ್ಟವಾಯಿತು. ಮನ ಬಂದಂತೆ ತಲೆಕೆಳಗಾಗ ತೊಡಗಿದುವು. ಕೊನೆಗೆ ಜನ ಉಸಿರಾಡುವುದೂ ಕಷ್ಟ ವಾಯಿತು.

ಈ ಕಷ್ಟಗಳನ್ನು ಜನರು ಸಹಿಸಲಾರ ದಾದರು. ಊರಿನ ಹಿರಿಯರೆಲ್ಲರೂ ಒಂದು ದಿನ ಅರಳೀ ಮರದ ಕೆಳಗೆ ಸಭೆ ಸೇರಿದರು. ಬುದ್ಧಿವಂತರು ವಿಚಾರಣೆ ಮಾಡಿ ಇದಕ್ಕೆಲ್ಲಾ ಒಂದೇ ಕಾರಣವೆಂದು ನಿಶ್ಚಯಿಸಿದರು.

ಅದೇನೆಂದರೆ, ವಾಕ್ಶುದ್ಧಿ ಮಾವಿನ ತೋಟದಲ್ಲಿ ತನ್ನ ತಂಗಿಯ ಹಣೆಗೆ ಏಟು ಬಿದ್ದಾಗ ಯಾವುದೋ ದುಷ್ಟಶಕ್ತಿ ಹಾಗೆ ಮಾಡಿ ಬರುವುದೆಂದು "ಈ ಶಕ್ತಿ ನಾಶ ವಾಗಲಿ" ಎಂದು 'ಶಪಿಸಿದ್ದನಷ್ಟೆ! ಅವನ ಬಾಯಿಂದ ಬಂದ ಮಾತು ಎಂದೂ

ಸುಳ್ಳಾಗುತ್ತಿರಲಿಲ್ಲ. ಆ ಶಾಪದಿಂದಲೇ ಈಗ ಆ "ಶಕ್ತಿ" ನಾಶವಾಗಿದೆ ಯೆಂದು ಊರ ಹಿರಿಯರು ಹೇಳಿದರು.

"ಈ ಶಕ್ತಿ ಏನು, ಹಾಳಾಗುವುದೆಂದರೇನು?" ಎಂದು ತಿಳಿಯದವರು ದೊಡ್ಡವರನ್ನು ಕೇಳಲಾಗಿ, ಅವರು ಹೀಗೆಂದರು.

"ನಾವು ವಾಸಿಸುತ್ತಿರುವ ಈ ಭೂಮಿಗೆ ಆಕರ್ಷಣ ಶಕ್ತಿಯಿದೆ. ಅಂದರೆ ಪ್ರತಿಯೊಂದು ವಸ್ತುವನ್ನೂ ಭೂಮಿ ತನ್ನ ಕಡೆ ಸೆಳೆದುಕೊಳ್ಳುತ್ತದೆ. ಈಗ ವಾಕ್ಶುದ್ಧಿಯ ಶಾಪದಿಂದ ಆ ಶಕ್ತಿ ನಾಶವಾಗಿ ಹೋಗಿದೆ. ಅದು ಹೋದುದರಿಂದ ಮನುಷ್ಯರೂ ಪದಾರ್ಥಗಳೂ ಭಾರವಿಲ್ಲದೆ ಎಲ್ಲಿದ್ದರಲ್ಲಿಯೇ ನಿಂತು ಹೋಗುತ್ತಿವೆ. ಗಾಳಿಯಲ್ಲಿ ಭಾರವೂ ಒತ್ತಡವೂ ಇಲ್ಲದಿರುವುದರಿಂದಲೇ ಮನುಷ್ಯರೂ ಪದಾರ್ಥಗಳೂ ಹೀಗೆ ಹಾರಿ ಹೋಗುತ್ತಿರುವುದು. ಆದ್ದರಿಂದಲೇ ನಮ್ಮ ಶ್ವಾಸಕೋಶಗಳಿಗೆ ಗಾಳಿ ಹೋಗದೆ ಉಸಿರಾಡಲು ತೊಂದರೆಯಾಗಿದೆ. ಇದೆಲ್ಲವನ್ನೂ ಕೇಳಿದಮೇಲೆ ಜನರೆಲ್ಲಾ ವಾಕ್ಶುದ್ಧಿಯ ಬಳಿಗೆ ಹೋಗಿ "ಮಗೂ ವಾಕ್ಶುದ್ಧಿ ನಿನ್ನ ಮಾತು ಸುಳ್ಳಾಗದೆಂದು ಎಲ್ಲರಿಗೂ ಗೊತ್ತು. ನಿನ್ನ ತಂಗಿಗೆ ಕಲ್ಲಿನೇಟು ಬಿದ್ದುದಕ್ಕೆ ನೀನು ಕೋಪದಿಂದ "ಈ ಶಕ್ತಿ ನಾಶವಾಗಲಿ" ಎಂದು ಶಪಿಸಿದ್ದು ಬಹಳ ಜನಕ್ಕೆ ಕೇಳಿಸಿತು. ಆದರೆ ಈ ಶಾಪದಿಂದಲೇ ಪ್ರಪಂಚವೆಲ್ಲಾ ಹೀಗೆ ತಲೆಕೆಳಗಾಗುತ್ತಿದೆಯೆಂಬುದನ್ನು ಯಾರೂ ತಿಳಿಯದೆ ಹೋದರು. ಈಗ ಊರ ಹಿರಿಯರೆಲ್ಲಾ ಈ ಕಷ್ಟಗಳಿಗೆಲ್ಲಾ ನಿನ್ನ ಶಾಪವೇ ಕಾರಣವೆಂದು ನಿಶ್ಚಯಿಸಿದ್ದಾರೆ. ಆದ್ದರಿಂದ ನಮ್ಮ ಮೇಲೆ ಕರುಣೆಯಿಟ್ಟು ಶಾಪವನ್ನು ಹಿಂದಕ್ಕೆ ತೆಗೆದುಕೋ ಎಂದು ಅವನನ್ನು ಬೇಡಿಕೊಂಡರು.

ಅವರ ಕೋರಿಕೆಯಂತೆ ವಾಕ್ಶುದ್ಧಿ ಹಾಗೆ ಮಾಡಲು ಭೂಮಿಗೆ ಮತ್ತೆ ಆಕರ್ಷಣ ಶಕ್ತಿ ಉಂಟಾಯಿತು. ಪ್ರಪಂಚ ಮೊದಲಿನಂತಾಗಿ ಜನಗಳಿಗೆ ಕಷ್ಟಗಳು ತಪ್ಪಿದುವು. ಅಂದಿನಿಂದ ವಾಕ್ಶುದ್ಧಿಯು ಕೂಡ ಹಿಂದು ಮುಂದು ನೋಡದೆ ಶಾಪ ಹಾಕುವುದನ್ನು ಬಿಟ್ಟನು.






ಒಂದು ಊರು. ಅಲ್ಲೊಂದು ಶಿವಾಲಯ. ಆ ಗುಡಿಯ ಪೂಜಾರಿ ಮಹಾ ಭಕ್ತ. ಆತನು ಪ್ರತಿ ದಿನವೂ ಶಿವಲಿಂಗಕ್ಕೆ ಪೂಜೆ ಮಾಡಿ, ಆ ಹೂವನ್ನು ಮಹಾರಾಜರಿಗೆ ಪ್ರಸಾದವಾಗಿ ಕಳುಹಿಸಿಕೊಡುತ್ತಿದ್ದ.

ಹೀಗೇ ಇರುವಲ್ಲಿ ಒಂದು ದಿನ ಪೂಜಾರಿ ಪಕ್ಕದಲ್ಲಿದ್ದ ಊರಿಗೆ ಹೋಗಬೇಕಾಗಿ ಬಂತು. ಹೋಗುವ ಮುನ್ನ ಪೂಜಾರಿ ತನ್ನ ಹೆಂಡತಿಯನ್ನು ಕರೆದು "ಪೂಜಾಪುಷ್ಪಗಳನ್ನು ಇವತ್ತು ನೀನು ಮಹಾರಾಜರಿಗೆ ಕಳುಹಿಸಿಕೊಡು. ಮರೆಯಬೇಡ" ಎಂದು ಮತ್ತೆ ಮತ್ತೆ ಹೇಳಿ ಹೊರಟ.

ಆಕೆ "ಹಾಗೇ ಆಗಲಿ" ಎಂದು ಹೇಳಿದಳೇ ಹೊರತು ಗಂಡನು ಹೋದ ತರುವಾಯ ಮಾತನ್ನು ಮರೆತು, ಮಹಾರಾಜನಿಗೆ ಕಳುಹಿಸಿಕೊಡಬೇಕಾಗಿದ್ದ ಹೂಗಳನ್ನು ತಲೆಯಲ್ಲಿ ಮುಡಿದುಕೊಂಡಳು.

ಸಾಯಂಕಾಲದ ವೇಳೆಗೆ ಪೂಜಾರಿಯು ಮನೆಗೆ ಹಿಂತಿರುಗಿದ. ಹೆಂಡತಿಯ ತಪ್ಪು ಕೆಲಸ ಅರಿತು, ಕೋಪದಿಂದ ಆಕೆಯ ತಲೆಯಲ್ಲಿದ್ದ ಹೂಗಳನ್ನು ಕಿತ್ತುಕೊಂಡು ಅವನ್ನೇ ಮಹಾರಾಜನಿಗೆ ಕಳುಹಿಸಿಕೊಟ್ಟನು.

ಮಹಾರಾಜರು ಆ ಹೂಗಳನ್ನು ನೋಡಿದರು. ಅದರಲ್ಲಿ ತಲೆ ಕೂದಲು ಸುತ್ತಿಕೊಂಡಿರುವುದು ಕಾಣಿಸಿತು. ಆತನು ಪೂಜಾರಿಯನ್ನು ಬರ ಹೇಳಿ ಕೋಪದಿಂದ "ಏನಿದು" ಎಂದು ಪ್ರಶ್ನೆ ಮಾಡಿದರು.

ಪೂಜಾರಿಗೆ ಏನು ಹೇಳಲೂ ತೋರಲಿಲ್ಲ. ಆದರೆ ಮಹಾರಾಜರು ಕೇಳಿದಾಗ ಯಾವುದಾದರೂ ಸಮಾಧಾನ ಕೊಡಬೇಕಲ್ಲವೇ? ಪ್ರಭೂ, ನಾನು ಪೂಜಿಸುವ ಶಿವಲಿಂಗಕ್ಕೆ ಕೂದಲಿದೆ. ಹೂಗಳಿಗೆ ಅದು ಸಿಕ್ಕಿಕೊಂಡಿರಬಹುದು." ಎಂದು ಧೈರ್ಯವಾಗಿ ನುಡಿದ.

ರಾಜನಿಗೆ ಆಶ್ಚರ್ಯವಾಯಿತು. "ನಾವು ಸಾಯಂಕಾಲ ದೇವರ ದರ್ಶನಕ್ಕೆ ಬರುತ್ತೇವೆ. ನೀನು ಹೇಳಿದಂತೆ ಶಿವಲಿಂಗಕ್ಕೆ ಕೂದಲು ತೋರಿಸಿದರೆ ಗೆದ್ದೆ, ಇಲ್ಲದಿದ್ದರೆ ನಿನ್ನ ತಲೆ ಕಡಿಸಿ ಕೋಟೆಯ ಬಾಗಿಲಿಗೆ

ಎಂ. ಆರ್. ಭಟ್, ಉಡುಪಿ.

ನೇತು ಹಾಕುತ್ತೇನೆ'' ಎಂದು ಎಚ್ಚರಿಕೆ ಕೊಟ್ಟ.

ಕೂಡಲೇ ಪೂಜಾರಿ ಗುಡಿಗೆ ಹೋದ. ಶಿವಲಿಂಗವನ್ನು ಗಟ್ಟಿಯಾಗಿ ಅಪ್ಪಿಕೊಂಡು ಒಂದೇ ಸವನೆ ಜಪ ಮಾಡ ತೊಡಗಿದ. ಸ್ವಲ್ಪ ಹೊತ್ತಾದನಂತರ ಶಿವನು ಪ್ರತ್ಯಕ್ಷನಾಗಿ "ಭಕ್ತನೇ, ಹಾಗೇಕೆ ಬಾಧೆ ಪಡುತ್ತಿರುವೆ? ನಿನಗೇನು ಬೇಕೋ ಕೇಳು''ಎಂದ.

ಆಗ ಪೂಜಾರಿ ಎರಡು ಕೈಗಳನ್ನೂ ಜೋಡಿಸಿಕೊಂಡು "ಪರಂಧಾಮ, ಮಹಾರಾಜರು ಕೇಳಿದ ಪ್ರಶ್ನೆಗೆ ಯೋಚಿಸದೆ ಗಾಬರಿಯಲ್ಲಿ ಬಂದ ಮಾತನ್ನು ಆಡಿ ಬಿಟ್ಟೆ. ನನ್ನ ತಪ್ಪು ಆಮೇಲೆ ಗೊತ್ತಾಯಿತು. ಆದ್ದರಿಂದ ನನ್ನ ಮಾತು ಸುಳ್ಳಾಗದಂತೆ ಕಾಪಾಡುವ ಭಾರ ನಿನ್ನದು. ಭಕ್ತನಾದ ನನ್ನನ್ನು ರಕ್ಷಿಸು.'' ಎಂದು ಪ್ರಾರ್ಥಿಸಿಕೊಂಡ.

"ನೀನು ಹೆದರಬೇಡ.'' ಎಂದು ಅಭಯವಿತ್ತು ಅಂತರ್ಧಾನನಾದ ಶಿವ.

ಸಾಯಂಕಾಲ ಮಹಾರಾಜರು ಆಲಯಕ್ಕೆ ದಯ ಮಾಡಿಸಿದರು. ದೇವರನ್ನು ನಂಬಿದ್ದ ಪೂಜಾರಿ, ಧೈರ್ಯದಿಂದ ಮಹಾರಾಜರನ್ನು ಬರಮಾಡಿಕೊಂಡು ಶಿವಲಿಂಗದ ಹತ್ತಿರ ಕರೆದುಕೊಂಡು ಹೊದ. ರಾಜನಿಗೆ ಶಿವಲಿಂಗದ ಮೇಲೆ ಕೂದಲಿರುವುದು ಕಾಣಿಸಿತು.

ತನ್ನನ್ನು ಮೋಸಪಡಿಸಲು ಪೂಜಾರಿ ಕೂದಲನ್ನು ಅಂಟಿಸಿರಬಹುದೇನೋ ಎಂಬ ಅನುಮಾನ ಪರೀಕ್ಷಿಸಲು ರಾಜನು ಬಂದು ಕೂದಲನ್ನು ಎಳೆದ. ಕೂದಲು ಕಿತ್ತು ಬಂದು ಜೊಳಜೊಳ ಎಂದು ರಕ್ತ ಸುರಿಯಿತು.

ರಾಜನಿಗೆ ದೃಷ್ಟಿ ಮಂಕಾಯಿತು. ಕೂಡಲೇ ಆತನು ತನ್ನ ತಪ್ಪನ್ನು ಅರಿತು ಶಿವಲಿಂಗಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ ಪರಪಾಟನಿಂದ ಪರೀಕ್ಷೆ ಮಾಡಿದೆ ಸ್ವಾಮಿ, ಕರುಣಾಮಯ, ನನ್ನನ್ನು ಕ್ಷಮಿಸು'' ಎಂದು ಬೇಡಿಕೊಂಡನು.

ಮತ್ತೆ ಆತನಿಗೆ ದೃಷ್ಟಿ ಲಭಿಸಿತು. ಈಶ್ವರನ ಮಹಿಮೆಯನ್ನು ಕಂಡು ರಾಜ ಮತ್ತು ಪೂಜಾರಿ ಮಾತ್ರವಲ್ಲದೆ ಅಲ್ಲಿ ನೆರೆದಿದ್ದವರಿಗೆಲ್ಲಾ ಆಶ್ಚರ್ಯವಾಯಿತು.



# ಚಂದಮಾಮ ಸ್ಪರ್ಧೆ

(ಮಕ್ಕಳ ಭಾಷಾಭಿವೃದ್ಧಿಗೆ)

## ಆಧಾರಗಳು

* ಎಡದಿಂದ ಬಲಕ್ಕೆ *

1. ಆಡು (ಪ್ರಾಣಿ).
3. ಈ ಭೇದದಿಂದ ತೊಂದರೆ ಅಧಿಕವಾಗಿದೆ.
5. ಕಷ್ಟವಲ್ಲದುದು.
6. ಬೆಂಕಿ.
8. ಪರಿಶುದ್ಧ.
11. ತೆಂಗಿನ ಕಾಯಿಯ ಮೇಲಿರುವುದು.
12. ಕನಿಕರ.
14. ಸುಳ್ಳು.
15. ಮೀನು ಹಿಡಿಯುವ ಸಾಧನ.




* ಮೇಲಿನಿಂದ ಕೆಳಕ್ಕೆ *

1. ಪ್ರಾಣ.
2. ಸಮುದ್ರ.
3. ಸೀತೆ.
4. ಎಳ್ಳು.
7. ಹೂಗಳಲ್ಲಿ ಶ್ರೇಷ್ಠ.
9. ಉಪಯೋಗ ಇಲ್ಲದ ಮಾತು.
10. ಕುರಿ ಕಾಯುವವ.
11. ದಿನವೂ ಇದನ್ನು ಗುಡಿಸಬೇಕು.
13. ದೇಹಕ್ಕೆ ಮುಖ್ಯ ಅಂಗ

## ರಂಗೋಲಿ



ಆರ್. ಪದ್ಮ



ಟಿ. ಎಸ್. ಪ್ರೇಮಾ.

## ಅನುಭವ



ಒಂದು ಊರಲ್ಲಿ ಒಬ್ಬ ಸಾಧು ಇದ್ದನು. ಅವನಿಗೆ ಪ್ರಾಣಿಗಳ ಮೇಲೆ ಬಹಳ ದಯೆ. ಅವನು ಅಲ್ಲಲ್ಲಿ ಸಂಚರಿಸಿ ಪ್ರಾಣಿಗಳನ್ನು ಹಿಂಸೆ ಮಾಡಬಾರದಾಗಿ ಉಪನ್ಯಾಸ ಕೊಡುತ್ತಿದ್ದನು.

ಒಂದು ದಿನ ಸಾಧುವು ಒಂದು ಮರದ ಕೆಳಗೆ ಕುಳಿತುಕೊಂಡು ವಿಶ್ರಾಂತಿ ಹೊಂದುತ್ತಿದ್ದನು. ಅವನಿಗೆ ಉದ್ದವಾದ ಗಡ್ಡವಿತ್ತು. ಆ ಗಡ್ಡದಲ್ಲಿ ಒಂದು ಕೆಂಜಿಗ(ಕೆಂಪು ಇರುವೆ) ವು ಹರಿದಾಡುತ್ತಿತ್ತು. ಅದನ್ನು ಕಂಡು ಸಾಧುವು, ಅಯ್ಯೋ! ಪಾಪ!! ಈ ಪ್ರಾಣಿಯು ತನ್ನ ನೆಲೆಯನ್ನು ಬಿಟ್ಟು ಇಲ್ಲಿ ಬಂದಿದೆ. ಇದನ್ನು ಇದರ ಗೂಡಿಗೆ ಬಿಡುವುದೇ ನನ್ನ ಧರ್ಮ ಎಂದಂದುಕೊಂಡು ಅದೇ ಮರದಲ್ಲಿದ್ದ ಗೂಡಿಗೆ ತನ್ನ ಗಡ್ಡವನ್ನು ಹೊಂದಿಸಿಟ್ಟು ಗೂಡಿಗೆ ಹೋಗುವಂತೆ ಕೆಂಜಿಗನನ್ನು ಕೇಳಿಕೊಂಡನು.

ಅಷ್ಟರಲ್ಲಿ ಗಾಳಿ ಬಲವಾಗಿ ಬೀಸಿ ಕೆಂಜಿಗದ ಗೂಡು ಅಲ್ಲಾಡಿದುದರಿಂದ ಗೂಡಿನ ಎಲ್ಲಾ ಇರುವೆಗಳು ಸಾಧುವಿನ ಗಡ್ಡದ ಮೇಲಕ್ಕೆ ಬಂದವು. ಮತ್ತು ಮುಖದ ಮೇಲೆಲ್ಲಾ ಕಚ್ಚಿ ಬಹಳ ನೋವನ್ನುಂಟುಮಾಡಿದುವು.
ಸಾಧುವು ಒಡನೆ ತನ್ನ ಗಡ್ಡ ಮುಖಗಳನ್ನು ಎರಡು ಕೈಗಳಿಂದಲೂ ತಿಕ್ಕಿದನು. ಕೈ ಬಿಟ್ಟು ಕೆಳಕ್ಕೆ ನೋಡುವಾಗ ನೂರಾರು ಕೆಂಜಿಗಳು ಸತ್ತುಬಿದ್ದಿದ್ದುವು. ಈ ಅನುಭವದಿಂದ ಅವನು ತನ್ನ ಮನಸ್ಸು ಬದಲಾಯಿಸಿದ.

ಅಂದಿನಿಂದ ಸಾಧುವು ಉಪನ್ಯಾಸ ಕೊಡುವಾಗ 'ಇರುವೆಯನ್ನು ಹೊರತು ಯಾವ ಪ್ರಾಣಿಯನ್ನೂ ಹಿಂಸಿಸಬೇಡಿರಿ' ಎನ್ನುತ್ತಿದ್ದನು.



—ಚಂದ್ರರಾಜಸೆಟ್ಟಿ.

## ರೈಲು ಬಂಡಿ

ಕೆ. ಕೃಷ್ಣಮೂರ್ತಿ.

ಎಕ್ಸ್‌ಪ್ರೆಸ್ ಬುಸ್ ಬುಸ್
ನೀರಿನ ಆವಿ ಬುಸ್ ಬುಸ್
ಇದ್ದಲ ಬೆಂಕಿ ಬುಸ್ ಬುಸ್
ಅದೇ ತಿಂಡಿ ಬುಸ್ ಬುಸ್
ಚಕ್ರ ಉರುಳು ಬುಸ್ ಬುಸ್
ಕಂಬಿ ಮೇಲೆ ಬುಸ್ ಬುಸ್

ಹಳ್ಳ ತಗ್ಗು ಟುಸ್ ಟುಸ್
ದಿಣ್ಣೇಯೆತ್ತರ ಬುಸ್ ಬುಸ್
ಕೈ ಮರ ಬಿತ್ತು ಬುಸ್ ಬುಸ್
ಸ್ಟೇಷನ್ ಬಂತು ಕುಯ್, ಕುಯ್.
ನಿಂತೇಬಿಟ್ಟೆ ಹುಷ್ ಹುಷ್
ಇಳಿದುಬಿಡು ಹುಷ್ಟಾರ್




ಮಕ್ಕಳಿರಾ,

ಮೇಲಿರುವ ಒಂಬತ್ತು ಚಿತ್ರಗಳಲ್ಲಿ ಎರಡು ಮಾತ್ರ ಒಂದೇ ವಿಧ. ಅವು ಯಾವುವು ಕಂಡುಹಿಡಿಯಿರಿ. ತಿಳಿಯದಿದ್ದರೆ ಮುಂದಿನ ಪುಟ ನೋಡಿ.

---

## ಒಗಟುಗಳಿಗೆ ಉತ್ತರ

೧. (ಬರವಣಿಗೆ), ೨. (ಪಾದರಸ), ೨ ೩. ಮೆಣಸಿನಕಾಯಿ),
೪. (ದಾಳಿಂಬೆಹಣ್ಣು), ೫. (ಅನಾನಸ್ ಹಣ್ಣು).

ಸಿ. ಆರ್. ಪ್ರಹ್ಲಾದ ವರದನ್.

## ಎಲೆಯ ಪೀಪಿ

ಮಾವಿನೆಲೆಯನು ಸುರುಳಿ ಸುತ್ತುತ
ಪೀಪಿ ಮಾಡಿದ ರಂಗನು
'ಪೀಪಿ ಪೀಪೀ ಕೂಕು' ಎನ್ನುತ
ಗಲಭೆ ಮಾಡಿದ ಮಂಗಸು.

ಎಲೆಯು ಬಿಚ್ಚಿತು, ಪೀಪಿ ಹೋಯಿತು
ಅಳುತ ನಿಂತನು ತುಂಟನು
ಅಣ್ಣನೆಡೆಗೇ ನಡೆದ ಕೂಗುತ
'ಪೀಪಿ ಕೊಡು; ಬಿಡೆ ಬಂಟನು.'

ಆರು ಆಣೆಗೆ ಹಸಿರು ಕೊಳಲನು
ತಂದುಕೊಟ್ಟನು ಅಣ್ಣನು
ಕೊಳಲನೂದುತ, 'ವಹವ' ಎನ್ನುತ
ಚಿಮ್ಮಿ ಕುಣಿದನು ಚಿಣ್ಣನು.

ವಸುದೇವ್ ಭೂಪಾಲಂ.

* * *

## ಅರ್ಥ—ಅನರ್ಥ

೧. ಚಂಡನ್ನು ಆಡುವವನು ಚಂಡಾಲ.
೨. ದಾಂಡನ್ನು ಹಿಡಿಯುವವನು ದಾಂಡಿಗ.
೩. ಇಂರ್ಜಿ ನಡೆಸುವವನು ಇಂಜಿನೀರ್.
೪. ರಾಗಕ್ಕೆ ಸ್ತ್ರೀಲಿಂಗ ರಾಗಿ.
೫. ಕರುಗೆ ಕೊಂಬು ಬಂದರೆ ಕುರು ವಾಗುತ್ತೆ.
೬. ಉಪ್ಪಿಗೆ ಹಿಟ್ಟು ಸೇರಿದರೆ ಉಪ್ಪಿಟ್ಟು.
೭. ಕೈಯನ್ನು ಹಿಡಿಯುವವನು ಕೈಪಿಡಿ.

ಕೆ. ವಿ. ಅನಂತ.

## ಚುಟಕಗಳು

### ಯಾವುದು ಚಂದ

ಹೆಣ್ಣು ಮುಡಿಗೆ ಹೂವು ಚಂದ
ಹೂವು ಇರುವ ತೋಟ ಚಂದ
ತೋಟದೊಂದು ನೋಟ ಚಂದ
ನೋಟಕಾಗಿ ಚಂದ 'ಚಂದಮಾಮ'

*

ಮಾವಗೊಂದು ಮಗಳು ಚಂದ
ಮಗಳಿಗೊಂದು ಮಗುವು ಚಂದ
ಮಗುವಿಗೊಂದು ಆಟ ಚಂದ
ಆಟಕಾಗಿ ಬಂದ ಚಂದಮಾಮ.

ಡಾ॥ ವೀರಯ್ಯ.

* * *

ಬಿಸಿಲು ದಿನ, ಕುಡಿಯೆ ದನ
ಪೂರ ಕೆರೆಯನು,
ಮಿಾನು ಹತ್ತು, ಹಾರಿ ಹೋಯ್ತು
ಸೇರಿ ಮುಗಿಲನು.

ವ. ಭೂಪಾಲಂ.

* * *

ಸುತ್ತ ಹಸುರು ಹೊಲ
ನಡುವೆ ಬಿಳಿಯ ಮೊಲ
ಆಡುತಿತ್ತು
ಹಾಡುತಿತ್ತು
ನಿಮಿಷಕೊಂದು ಸಲ.

*

ಮೂಡಲಲ್ಲಿ ರವಿ
ಮೂಡಿ ಬೆಳಗಿ ಬುವಿ
ಮೆರೆದು ಮೇಲೆ
ಸಂಜೆ ವೇಳೆ
ಕಡಲಿಗಿಳಿದ ರವಿ.

ಜಿ. ರಾಮದಾಸನಾಯ್ಕ.

ಳ೭ನೇ ಪುಟದ ೬, ಲನೇ ನಂಬರಿನ ಚಿತ್ರಗಳು ಒಂದೇ ವಿಧ.



ಪಾಪ! ಮಗು ಮನೆಯಿಂದ ಹೊರಗೆ ಎಲ್ಲೋ ಹೋಗಿ ಕೂತುಬಿಟ್ಟಿದೆ. ತಾಯಿ ಹುಡುಕುತ್ತಿದ್ದಾಳೆ. ಅವಳಿಗೆ ಯಾವ ದಾರಿ ಹಿಡಿದರೆ ಸಿಕ್ಕುತ್ತದೆ ತಿಳಿಸಿರಿ ನೋಡೋಣ!




## ಒಗಟುಗಳು

೧. ಬಿಳೀ ಹೊಲದಲ್ಲಿ ಕರೀ ಬೀಜ ಬಿತ್ತಿದೆ.

೨. ಬೆಳ್ಳಿಯ ಹುಡುಗಿ, ಹಿಡಿದರೆ ಕೈಗೆ ಸಿಗುವುದಿಲ್ಲ.

೩. ನೋಡೋಕೆ ಮಳ್ಳಿ. ಇಟ್ಟರೆ ಕೊಳ್ಳಿ.

೪. ಹಸುರು ಪೊಟ್ಟೆಯಲ್ಲಿ ಕೆಂಪು ಮರಿಗಳು.

ಸಿ. ಆರ್. ಪ್ರಹ್ಲಾದ ವರದನ್.

೫. ಮರದ ಮೇಲೆ ಹಣ್ಣು; ಹಣ್ಣಿನ ಮೇಲೆ ಮರ.

ಗುಪ್ತ.

## ಕನ್ನಡ ಮಾತೆ

ಟಿ. ಚಂದ್ರರಾಜ ಸೆಟ್ಟಿ.

ಕನ್ನಡ ಕುವರರ ಮಾತೆಯೆ ನಿನ್ನನು
ಉನ್ನತ ತೋಷದಿ ನಮಿಸುವೆವೂ.
ನಿನ್ನಯ ಕುವರರ ಹರಸುತ ಬೇಗನೆ
ಸನ್ನುತ ವರವನು ದಯಮಾಡು.

ಚಿನ್ನದ ಗನಿಯಾ ಒಡತಿಯು ನೀನು
ಕನ್ನಡ ದೇವಿಯೆ ನಮಗಿನ್ನು
ಉನ್ನತ ಭಾಗ್ಯವು ಬೇಕೇ ಬೇರೆ?
ನಿನ್ನಯ ಕುವರರ ಹರಸವ್ವಾ.

ರನ್ನ ಪಂಪರಾ ಮಾತೆಯು ನೀನು
ಹೊನ್ನಮ್ಮನು ನಿನ್ನಯ ಕುವರಿ
ಚನ್ನ ಕವಿತೆಯಾ ಕಟ್ಟುತ ನಿನ್ನಯ
ಉನ್ನತ ಕೀರ್ತಿಯ ಬೆಳಗಿದರೂ.

ಶಿಲೆಗಳ ಕೆತ್ತುತ, ಕಲೆಗಳ ಮೂಡಿಸಿ
ಚಲುವಿನ ಉಡುಗರೆಯನು ಇತ್ತಾ
ಕಲಿಗಳ ಮಾತೆಯು ಕನ್ನಡ ಪ್ರೀತೆಯು
ಬಲು ವಿಖ್ಯಾತೆಯು ನೀನವ್ವ.

ಕನ್ನಡ ಮಾತೆಯೆ ಕನ್ನಡ ಬಾವುಟ
ಉನ್ನತ ಗೌರವ ಪಡೆಯುತಲೀ
ಕನ್ನಡ ಕುವರರು ಒಂದೇ ಮತಿಯಲಿ
ನಿನ್ನಯ ಚರಣವ ಸೇವಿಸಲಿ.

ಪ್ರಿಯ ವಾಚಕರೇ,

ನಮಗೆ ಪ್ರತಿ ದಿನವೂ ಉತ್ಸಾಹಶಾಲಿಗಳಾದ ಅನೇಕ ಓದುಗರಿಂದ ಚಂದಮಾಮನ ಹಳೇ ಪ್ರತಿಗಳನ್ನು ಕಳುಹಿಸಿಕೊಡಬೇಕೆಂದು ಕಾಗದಗಳು ಬರುತ್ತಿವೆ. ಪ್ರತಿ ಸಲವೂ ಹೆಚ್ಚು ಹೆಚ್ಚು ಪ್ರತಿಗಳನ್ನು ಮುದ್ರಿಸುತ್ತಿದ್ದರೂ ಎಲ್ಲವೂ ಒಂದೂ ಬಿಡದೆ ಖರ್ಚಾಗಿಹೋಗುತ್ತಾ ಇವೆ. ಆ ಕಾರಣದಿಂದ ನಮ್ಮಲ್ಲಿ ಚಂದಮಾಮದ ಯಾವ ಹಿಂದಿನ ಪ್ರತಿಗಳೂ ಉಳಿದಿಲ್ಲ. ಆದುದರಿಂದ ದಯವಿಟ್ಟು ಯಾರೂ ಹಿಂದಿನ ಪ್ರತಿಗಳಿಗಾಗಿ ಕಾಗದ ಬರೆಯಬಾರದಾಗಿ ಈ ಮೂಲಕ ಕೇಳಿಕೊಳ್ಳುತ್ತೇವೆ. ಅಂತಹ ಓದುಗರ ಈ ಆಸೆಯನ್ನು ಪೂರೈಸಲು ಸಾಧ್ಯವಾಗದುದಕ್ಕಾಗಿ ವಿಷಾದಿಸುತ್ತೇವೆ. ಮುಂದೆಯಾದರೂ ಅಂತಹ ಕೊರತೆಯನ್ನು ಹೋಗಲಾಡಿಸಲು ಇನ್ನೂ ಹೆಚ್ಚು ಪ್ರತಿಗಳನ್ನು ಮುದ್ರಿಸಲು ಏರ್ಪಡಿಸುತ್ತೇವೆ. ಇದುವರೆಗೆ ಚಂದಾದಾರರಾಗದವರು ತಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಲು ಚಂದಾದಾರರಾಗುವುದು ಉತ್ತಮ. ಮತ್ತು ಚಂದಮಾಮನ ಮೇಲೆ ವಾಚಕರ ಪ್ರೀತಿ ವಿಶ್ವಾಸಗಳು ಇದೇ ರೀತಿ ಹೆಚ್ಚುತ್ತಿರಲೆಂದು ಆಶಿಸುತ್ತೇವೆ.

ಎಂ. ಟಿ. ವಿ. ಆಚಾರ್ಯ,
ಸಂಪಾದಕ.

# ಹಿಂದೀ ಐದನೆಯ ಪಾಠ

ಮಕ್ಕಳೇ !

ನಿಮಗೆ ಇದುವರೆಗೆ ಅಕ್ಷರ, ಕಾಗುಣಿತ, ಒತ್ತಕ್ಷರಗಳನ್ನು ಕಲಿಯುವುದನ್ನು ತಿಳಿಸಿದೆ. ಈಗ ಇಲ್ಲಿ ಕೊಟ್ಟಿರುವ ಪಾಠವನ್ನು ಓದಿ ಅರ್ಥ ಮಾಡಿಕೊಳ್ಳಿರಿ.

| | | |
|---|---|---|
| यह = ಇದು. ಇವನು, ಇವಳು, ಈ | किताब = ಪುಸ್ತಕ | क्या = ಏನು· |
| वह = ಅದು, ಅವನು, ಅವಳು, ಆ | कलम = ಲೇಖಣಿ | कहाँ = ಎಲ್ಲಿ |
| है = ಇದೆ, ಇದ್ದಾನೆ, ಇದ್ದಾಳೆ | मेज़ = ಮೇಜು | पर = ಮೇಲೆ |
| दवात = ಶಾಯಿ ಬುಡ್ಡಿ | में = ಲ್ಲಿ, (ಪ್ರತ್ಯಯ) | घर = ಮನೆ |
| कौन = ಯಾವ, ಯಾರು | लडका = ಹುಡುಗ | एक = ಒಂದು |
| बहन = ಸಹೋದರಿ | का, की = ಅ,(ಪ್ರತ್ಯಯ) | लडकी = ಹುಡುಗಿ. |

| | | |
|---|---|---|
| यह किताब है । | किताब मेज़ पर है । | वह राम है । |
| यह कलम है । | मेज़ कहां है ? | वह लड़का है । |
| कलम दवात में है । | मेज़ घर में है । | वह कहां है ? |
| किताब मेज़ पर है । | यह क्या है ? | वह घर में है । |
| मेज़ घर में है । | यह कलम है । | राम का घर मांबलम में है । |
| यह क्या है ? | कलम कहां है ? | वह कौन है ? |
| यह किताब है । | कलम दवात में । | वह रमणी है । |
| किताब कहां है ? | वह कौन है ? | रमणी राम की बहन है । |



ಈ ಚಿತ್ರಕ್ಕೆ ಎಲ್ಲೆಲ್ಲಿ ಎಂತೆಂತಹ ಬಣ್ಣ ಹಾಕಬೇಕೋ ನೋಡಿ. ನಿಮಗೆ ಅಂದವೆಂದು ಕಂಡ ಬಣ್ಣಗಳನ್ನು ಹಾಕಿರಿಸಿಕೊಳ್ಳಿ. ಮುಂದಿನ ಸಂಚಿಕೆಯಲ್ಲಿ ನಾವು ಬಣ್ಣ ಹಾಕಿಸುತ್ತೇವೆ. ಆದರೊಂದಿಗೆ ಹೋಲಿಸಿ ನೋಡಿ.

Controlling Editor : SRI CHAKRAPANI

